# ತ್ರಿವೇಣೀ





ಶ್ರೀ ರಾಮಕೃಷ್ಣಾಶ್ರಮ

ಮೈಸೂರು.

೧೯೫೦

ತ್ರಿವೇಣೀ, ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ ಶ್ರೀ ಶಾರದಾದೇವಿ ಇವರ ಜೀವನ ಸಂಗಮ. ಸಾಕ್ಷಾತ್ಕಾರದ ಜಟಾಜೂಟದಿಂದ ಧುಮುಕಿ ಭವದ ಅಘಮೋಚನೆಗಾಗಿ ಮಂದಗಮನದಿಂದ ಗಂಗೆಯಂತೆ ಪ್ರವಹಿಸುವುದೇ ಶ್ರೀ ರಾಮಕೃಷ್ಣರ ಜೀವನ. ಕ್ಷಾತ್ರತೇಜಸ್ಸಿನಿಂದಲೂ ಓಜಸ್ಸಿನಿಂದಲೂ ಶಕ್ತಿಪೂರ್ಣವಾಗಿ ಭೋರ್ಗರೆದು ಹರಿಯುವ ಸ್ವಾಮಿ ವಿವೇಕಾನಂದರ ಜೀವನದಿ ಈ ಗಂಗೆಗೆ ಸೇರುವುದು. ಸಾತ್ತ್ವಿಕ ಪ್ರಧಾನವಾಗಿ, ಕಂಡರೂ ಕಾಣದಂತೆ, ಪರಿಶುದ್ಧಾತ್ಮರೂ, ಕ್ಷಮಾಶೀಲರೂ ಆದ ಮಹಾತಪಸ್ವಿನಿ ಶ್ರೀ ಮಾತೆ ಶಾರದಾದೇವಿಯವರ ಧ್ಯಾನಮಯ ಮೌನ ಜೀವನ ಧಾರೆಯೂ ಈ ಸಂಗಮದಲ್ಲಿ ಐಕ್ಯವಾಗುವುದು.

ಬೆಲೆ ೧-೦-೦



ಶ್ರೀ ವಿವೇಕಾನಂದ ಸ್ವಾಮಿಗಳವರು

" ಪ್ರೇಮ, ಸತ್ಯಾನುರಾಗ, ಮಹಾವೀರ್ಯ ಇವುಗಳ ಸಹಾಯದಿಂದ ಸಕಲ ಕಾರ್ಯವೂ ಕೈಗೂಡುವುದು "

# ಸ್ವಾಮಿ ವಿವೇಕಾನಂದ

ಕ್ರಿ.ಶ. ೧೮೯೩ ನೆಯ ಸೆಪ್ಟಂಬರ್ ಹನ್ನೊಂದನೆಯ ದಿನ. ಇಂದಿಗೆ ಸುಮಾರು ಐವತ್ತೆರಡು ವರುಷಗಳ ಹಿಂದೆ ಅಮೇರಿಕಾ ದೇಶದ ಚಿಕಾಗೊ ನಗರದಲ್ಲಿ ದೊಡ್ಡ ಸಭೆ ನೆರೆದಿದೆ. ಎಲ್ಲಾ ಧರ್ಮದವರನ್ನೂ ಒಟ್ಟುಗೂಡಿಸಿದ ಒಬ್ಬರು ಇನ್ನೊಬ್ಬರ ಅಭಿಪ್ರಾಯವನ್ನು ತಿಳಿದು ಜಾತಿದ್ವೇಷಗಳನ್ನು ಕಡಿಮೆ ಮಾಡಬೇಕೆಂಬುದೆ ಆ ಸಮ್ಮೇಳನದ ಗುರಿ. ಜಗತ್ತಿನ ನಾನಾ ಭಾಗಗಳಿಂದ ಆಯಾ ಧರ್ಮಕ್ಕೆ ಸೇರಿದ ಹಲವು ವಿದ್ವಾಂಸರು ಅಲ್ಲಿ ನೆರೆದಿರುವರು. ಬೆಳಗಿನಿಂದ ಒಬ್ಬೊಬ್ಬರಾಗಿ ಒಂದು ವೇದಿಕೆಯ ಮೇಲೆ ನಿಂತು, ತಮ್ಮ ತಮ್ಮ ಮತಗಳನ್ನು ಪ್ರತಿಪಾದಿಸಿದರು. ಅಂದಿನ ಸಂಜೆ ಕೊನೆಯ ಭಾಷಣ ಬಂದಿತು. ಕಾವಿಯ ನಿಲುವಂಗಿ ತೊಟ್ಟು ಅದೇ ಬಣ್ಣದ ಪೇಟವನ್ನು ಸುತ್ತಿದ್ದ ಸುಂದರವಾದ ಗಂಭೀರ ಮನುಷ್ಯನೊಬ್ಬನು ಮಾತನಾಡಲು ಬಂದು ನಿಂತನು. ಪ್ರೇಕ್ಷಕರನ್ನು **“ಅಮೇರಿಕದ ಸಹೋದರ ಸಹೋದರಿಯರೆ”** ಎಂದು ಸಂಬೋಧಿಸಿದನು. ನೆರೆದಿದ್ದವರೆಲ್ಲ ಚಪ್ಪಾಳೆ ತಟ್ಟಿದರು! ದೊಡ್ಡ ಸಿಡಿಲಿನ ಗದ್ದಲವೆದ್ದಿತು ಸಮ್ಮೇಳನದಲ್ಲಿ. ನಿಂತಮೇಲೆ ಅವರ ಹಿಂದೂ ಧರ್ಮದ ಪರವಾಗಿ ಅಲ್ಲಿ ನೆರೆದವರನ್ನು ವಂದಿಸಿದರು. ಅವರ ಭಾಷಣದ ಶೈಲಿ ಮತ್ತು ಭಾವಗಳು ಎಲ್ಲರನ್ನೂ ಆಕರ್ಷಿಸಿತು. ಅವರೇ ಸ್ವಾಮಿ ವಿವೇಕಾನಂದರು! ಎಲ್ಲರ ಬಾಯಿಯಲ್ಲಿಯೂ ಅನಂತರ ಅವರ ಮಾತೆ. ಎಲ್ಲಾ ಪತ್ರಿಕೆಗಳಲ್ಲಿಯೂ ಅವರ ಭಾವ ಚಿತ್ರವೆ! ಕೋಟ್ಯಾಧೀಶರು ಅವರನ್ನು ತಮ್ಮ ಮನೆಗೆ ಕರೆಯುವುದಕ್ಕೆ ನಾನು ತಾನೆಂದ ಮುಂದೆ ಬಂದರು.

ಅಮೇರಿಕಾ ದೇಶದಲ್ಲಿ ಭಾರತೀಯನೊಬ್ಬನು ನಿಂತು ಇಷ್ಟು ಸುಂದರವಾಗಿ ಮಾತನಾಡಿ ಎಲ್ಲರ ಮನಸ್ಸನ್ನೂ ಸೆಳೆದುದು ಇದೇ ಮೊದಲು. ಸ್ವಾಮಿ ವಿವೇಕಾನಂದರು ಸನಾತನ ಹಿಂದೂಧರ್ಮದ

ತತ್ವಗಳನ್ನು ಪಾಶ್ಚಾತ್ಯ ದೇಶೀಯರಿಗೆ ಬೋಧಿಸಿದರು. ನಮ್ಮ ಧರ್ಮ, ನಾಗರಿಕತೆ, ಸಂಸ್ಕೃತಿ ಮತ್ತೆ ಯಾವ ದೇಶಕ್ಕೂ ಕೀಳಲ್ಲವೆಂದು ಬೋಧಿಸಿದರು. ಅಲ್ಲಿಯ ಜನರು ಭರತಖಂಡವೆಂದರೆ ಅದೊಂದು ಕಾಡು ಜನರು ಇರುವ ದೇಶವೆಂದು ತಿಳಿದಿದ್ದರು. ಅವರ ಅಲಕ್ಷ್ಯದ ಕಸದ ಬುಟ್ಟಿಯಲ್ಲಿತ್ತು ನಮ್ಮ ದೇಶ. ಅದನ್ನು ಸ್ವಾಮಿ ವಿವೇಕಾನಂದರು ಹೊಗಲಾಡಿಸಿದರು! ಎಲ್ಲಾ ದೇಶದ ಎದುರಿಗೆ ಗೌರವದಿಂದ ನಿಲ್ಲುವಂತೆ ಮಾಡಿದರು. ಇಂತಹ ಪುತ್ರನನ್ನು ಹೆತ್ತ ತಂದೆತಾಯಿಗಳು ಧನ್ಯರು, ಮಾನ್ಯರು. ಇಡೀ ದೇಶವೆ ಅವರಿಗೆ ಚಿರಋಣಿ.

ನೂರಾರು ವರುಷದಿಂದ ನಮ್ಮದೇಶ ಗುಲಾಮಗಿರಿಯಲ್ಲಿ ನರಳುತ್ತಿದೆ. ಐಶ್ವರ್ಯವೆಲ್ಲ ಪರರ ಪಾಲಾಗುತ್ತಿದೆ. ಮಾನ ಮುಚ್ಚಿಕೊಳ್ಳುವುದಕ್ಕೆ ಚಿಂದಿ ಬಟ್ಟೆ ಇಲ್ಲದೆ ಇರುವವರು ಎಷ್ಟೋ ಮಂದಿ. ಹುಟ್ಟಿ ಸಾಯುವ ತನಕ ಒಂದು ದಿನವೂ ಸುಖಭೋಜನವಿಲ್ಲದೆ ಇರುವವರು ಎಷ್ಟೋ ಮಂದಿ. ಚಲಿಸುವ ಎಲುಬಿನ ಗೂಡಿನಂತಿರುವವರು ಎಷ್ಟೋ ಮಂದಿ. ಇಂತಹ ಕಾರ್ಪಣ್ಯ ಸ್ಥಿತಿಗೆ ಬಂದಿದೆ ನಮ್ಮ ದೇಶ. ಆದರೂ ಭರತಖಂಡ ವಿವೇಕಾನಂದರಂತಹ ಪುತ್ರರತ್ನಕ್ಕೆ ಜನ್ಮವಿತ್ತಿದೆ. ಇದನ್ನು ನೋಡಿದರೆ ನಮ್ಮ ದೇಶ ಇದೇ ಸ್ಥಿತಿಯಲ್ಲಿ ಇರುವುದಿಲ್ಲ; ರೋಮ್, ಈಜಿಪ್ಟ್, ಬ್ಯಾಬಿಲೋನ್ ಮುಂತಾದ ಹಿಂದಿನ ದೇಶಗಳು ಮಣ್ಣು ಪಾಲಾದಂತೆ ಆಗುವುದಿಲ್ಲ ಎಂದು ಹೇಳಬಹುದು. ಚಳಿಗಾಲದಲ್ಲಿ ಎಲೆಗಳನ್ನೆಲ್ಲ ಕಳೆದು ಕೊಂಡ ಮರದಂತೆ ನೋಡಲು ಒಣಗಿದಂತೆ ಕಾಣುವುದು. ಆದರೆ ಮರದೊಳಗೆ ಜೀವ ಇದೆ. ಹೊಸ ತಳಿರು ಮುಂದೆ ಬಿಡುವುದು. ಹೂವು ಅರಳುವುದು, ಕಾಯಾಗುವುದು. ಅಲ್ಲಿಗೆ ಹಾರುವ ಹಕ್ಕಿಗಳ ತಂಡ ಬರುವುದು. ನಾಲ್ಕು ದಿಕ್ಕೂ ಅವುಗಳ ಕಲಕಲ ನಾದದಿಂದ ತುಂಬುವುದು. ನಮ್ಮ ನಾಡು ಈಗ ನಿದ್ರಿಸುತ್ತಿದೆ; ಸತ್ತಿಲ್ಲ. ಕ್ರಮೇಣ ಜಾಗ್ರತವಾಗುತ್ತಿದೆ. ಪ್ರಗತಿಯ ಶಿಖರವನ್ನು ಮುಟ್ಟಿ ಹಿಂದುಳಿದವರನ್ನು ಆ ಕಡೆಗೆ ಕರೆದೊಯ್ಯುವ ಮಹಾಶಕ್ತಿ ಇದೆ. ಶ್ರೀ ರಾಮಕೃಷ್ಣರು,

ಸ್ವಾಮಿ ವಿವೇಕಾನಂದರು, ಮಹಾತ್ಮ ಗಾಂಧೀಜಿಯವರು, ಅರವಿಂದರು ಇವರುಗಳೇ ಅದಕ್ಕೆ ಸಾಕ್ಷಿ.

ಸ್ವಾಮಿ ವಿವೇಕಾನಂದರು ಹೊಸದಾಗಿ ಏನನ್ನೂ ಬೋಧಿಸಲಿಲ್ಲ. ಹೊಸ ತತ್ವವನ್ನು ಜಾರಿಗೆ ತರಲಿಲ್ಲ. ಹೊಸ ಧರ್ಮವನ್ನು ಸ್ಥಾಪನೆ ಮಾಡಲಿಲ್ಲ. ನಮ್ಮ ಹಿಂದಿನ ಗೀತೆ ಉಪನಿಷತ್ತುಗಳ ಸಂದೇಶದಂತೆ ತಮ್ಮ ಜೀವನವನ್ನು ತಿದ್ದಿದರು. ಅದನ್ನೆ ತಮ್ಮ ಸಿಂಹವಾಣಿಯಲ್ಲಿ ಜಗತ್ತಿಗೆ ಬೋಧಿಸಿದರು. ಜೀವನವನ್ನು ಇವರು ಹಳಿಯಲಿಲ್ಲ. ಜೀವನ ದಲ್ಲಿ ಒಂದು ಉತ್ಸಾಹವನ್ನು ತುಂಬುವದು ಇವರ ಸಂದೇಶ. ನಿರಾಶೆ ಯಿಲ್ಲ ಇವರ ಬೋಧನೆಯಲ್ಲಿ. ಎಂತಹ ನಿರಾಶೆಯ ಕತ್ತಲಲ್ಲಿಯೂ ಆಶೆಯ ಹಣತೆಯನ್ನು ಹಚ್ಚುವುದು ಇವರ ವಾಣಿ.

ಎಲ್ಲಾ ನಮ್ಮ ಹಿಂದಿನ ಕರ್ಮ ಕರ್ಮ ಎಂದು ಕಣ್ಣು ಮುಚ್ಚಿ ಕೈಕಟ್ಟಿ ಕುಳಿತವರ ಗುಂಪಿಗೆ ಇವರು ಸೇರಿಲ್ಲ. ಇಂದು ಭರತಖಂಡ ಅಧೋಗತಿಗೆ ಇಳಿದಿದ್ದರೆ, ಅದಕ್ಕೆ ನಾವು ಕಾರಣ. ಭರತಖಂಡವೆನ್ನು ವುದು ಒಂದು ದೊಡ್ಡ ದೇವಾಲಯ. ನೂರಾರು ವರುಷಗಳಿಂದ ಮೇಲೆ ಮೇಲೆ ಬಿದ್ದ ಕಸವನ್ನು ಎಲ್ಲರೂ ಗುಡಿಸಬೇಕು; ಸಾರಿಸಬೇಕು. ದೇವರನ್ನು ಕಾಣಬೇಕಾದರೆ, ಕಲ್ಲಿನ ವಿಗ್ರಹದಲ್ಲಿ ಮಾತ್ರವಲ್ಲ; ಎಲ್ಲರ ಹೃದಯದಲ್ಲಿಯೂ ಅವನನ್ನು ನೋಡಬೇಕು. ಪುಣ್ಯವಂತರಲ್ಲಿ ಮಾತ್ರ ವಲ್ಲ, ಪಾಪಿಗಳಲ್ಲಿ ಅವನನ್ನು ಹೆಚ್ಚಾಗಿ ನೋಡಬೇಕು. ಘನ ಪಂಡಿತರಲ್ಲಿ ಮಾತ್ರವಲ್ಲ, ಕಡುಮೂರ್ಖರಲ್ಲಿ ಅವನನ್ನು ನೋಡಬೇಕು. ಹಿಂದಿನ ಧರ್ಮ, "ಅತಿಥಿ ದೇವೋ ಭವ, ಮಾತೃ ದೇವೋ ಭವ, ಪಿತೃ ದೇವೋ ಭವ" ಎಂದು ಮಾತ್ರ ಸಾರಿತು. ಜೊತೆಗೆ ಸ್ವಾಮಿ ವಿವೇಕಾನಂದರು. "ದೀನ ದೇವೋ ಭವ, ದರಿದ್ರ ದೇವೋ ಭವ, ಪಾಪಿ ದೇವೋ ಭವ" ಎಂದು ಸಾರಿದರು.

ಇವರ ಜನ್ಮ ಒಂದು ಸುಂಟರ ಗಾಳಿಯಂತೆ. ಹಲವು ಘಟನೆ ಗಳಿಂದ ಕೂಡಿ ಚಲಿಸುತ್ತಿರುವುದು. ಜಗದ ಹವ್ಯಾಸವನ್ನೇ ಬಿಟ್ಟ ಸನ್ಯಾಸಿಗಳ ಗುಂಪಿಗೆ ಸೇರಿದವರಲ್ಲ ಇವರು. ಕಠೋರ ಸನ್ಯಾಸಿಗ

ಬೇನೋ ನಿಜ ಇವರು. ಆದರೆ ಜೊತೆಗೆ ವೀರ ದೇಶಭಕ್ತರು. ಕಲೋಪಾಸಕರು; ದೊಡ್ಡ ಕರ್ಮಯೋಗಿಗಳು, ಭಕ್ತ ಶ್ರೇಷ್ಠರು, ಧ್ಯಾನಸಿದ್ಧರೂ ಆಗಿದ್ದರು. ಅವರ ಜೀವನದ ಸಂಕ್ಷೇಪ ಪರಿಚಯಕ್ಕೆ ಇನ್ನು ಹೊರಡೋಣ.

---

# ಬಾಲ್ಯ

ಕಲ್ಕತ್ತೆಯಲ್ಲಿ ವಿಶ್ವನಾಥದತ್ತ ಮತ್ತು ಭುವನೇಶ್ವರಿ ದೇವಿ ಎಂಬ ಒಬ್ಬ ಕಾಯಸ್ಥ ದಂಪತಿಗಳು ವಾಸವಾಗಿದ್ದರು. ವಿಶ್ವನಾಥ ದತ್ತ ವಕೀಲಿ ಕೆಲಸ ಮಾಡುತ್ತಿದ್ದರು. ಕೆಲಸದಿಂದ ಅವರಿಗೆ ಸಾಕಾಗುವಷ್ಟು ವರಮಾನ ಸಿಕ್ಕುತ್ತಿತ್ತು. ಇವರದು ಧಾರಾಳ ಸ್ವಭಾವ. ಬಡವರನ್ನು ನೋಡಿದಾಗ ಮರುಗುವ ಹೃದಯ. ಯಾರು ಒಂದು ಸಹಾಯ ಕೇಳಿದರೂ ಇಲ್ಲವೆಂದು ಹೇಳುವ ಸ್ವಭಾವದವರಲ್ಲ. ದೊಡ್ಡ ಮೇಧಾವಿ. ವಿಶಾಲವಾದ ಪ್ರಪಂಚದ ಅನುಭವವಿತ್ತು. ಲಲಿತಕಲೆ, ಸಾಹಿತ್ಯ ಮುಂತಾದುವುಗಳಲ್ಲಿ ಅಭಿರುಚಿ.

ಇವರ ಹೆಂಡತಿ ಭುವನೇಶ್ವರಿದೇವಿ. ಇವರಿಗೆ ಅಚ್ಚುಮೆಚ್ಚಿನವರು. ನಡೆ ನುಡಿಯಲ್ಲಿ ರಾಣಿಯ ಗಾಂಭೀರ್ಯವಿತ್ತು. ಪೂಜೆ, ವ್ರತ, ಮುಂತಾದುವನ್ನು ಮಾಡುವುದೆಂದರೆ ಅವರಿಗೆ ತುಂಬ ಆಸೆ. ರಾಮಾಯಣ ಮತ್ತು ಮಹಾಭಾರತ ಇವರು ಪ್ರತಿ ದಿನವೂ ಓದುತ್ತಿದ್ದ ಗ್ರಂಥಗಳು. ಪುರಾಣದಲ್ಲಿ ಬರುವ ತ್ಯಾಗಿಗಳ, ತಪಸ್ವಿಗಳ, ವೀರಪುಂಗವರ ಆದರ್ಶ ಇವರ ರಕ್ತಗತವಾಗಿತ್ತು.

ಎರಡು ಹೆಣ್ಣು ಮಕ್ಕಳು ಅವರಿಗೆ ಆಗಿದ್ದುವು. ಒಂದು ಗಂಡು ಮಗುವಿಗಾಗಿ ಅವರು ತವಕ ಪಡುತ್ತಿದ್ದರು. ಕಾಶಿಯ ವಿಶ್ವೇಶ್ವರನಿಗೆ ಹರಕೆ ಹೊತ್ತರು. ಪೂಜೆಯಲ್ಲೂ, ಧ್ಯಾನದಲ್ಲೂ ಕಾಲವನ್ನು ಕಳೆದರು. ಒಂದು ಗಂಡು ಮಗುವನ್ನು ಕರುಣಿಸೆಂದು ದೇವರನ್ನು ಪ್ರಾರ್ಥಿಸಿದರು.

ಒಂದು ದಿನ ಅವರಿಗೊಂದು ಕನಸು ಬಿತ್ತು. ಪ್ರಕಾಶಮಾನವಾದ ಶಿವನನ್ನು ಅಲ್ಲಿ ನೋಡಿದರು. ಕ್ರಮೇಣ ಅವನು ಒಂದು ಸಣ್ಣ ಮಗುವಿನ ರೂಪವನ್ನು ತಾಳಿ ಇವರ ತೊಡೆಯ ಮೇಲೆ ಒಂದು ಕುಳಿತು ಆಡತೊಡಗಿದನು. ಇನ್ನು ಇವರ ಆನಂದಕ್ಕೆ ಪಾರವೇ ಇಲ್ಲ. ಆದರೆ ಕನಸು ಜಾರಿತು. ಇದಾದ ಕೆಲವು ತಿಂಗಳ ಮೇಲೆ ಅವರಿಗೆ ಒಂದು ಗಂಡು ಮಗು ಹುಟ್ಟಿತು, ಅದು ಕ್ರಿ.ಶ. ೧೮೬೩ ಜನವರಿ ೧೨ ನೆಯ ತಾರೀಖಿನಲ್ಲಿ. ಮೊದಲು ಮಗುವಿಗೆ ವಿರೇಶ್ವರ ಎಂದು ನಾಮಕರಣ ಮಾಡಿದರು. ಅನ್ನಪ್ರಾಶನದ ಸಮಯದಲ್ಲಿ ನರೇಂದ್ರನಾಥನೆಂದು ಕರೆದರು. ತಂದೆತಾಯಿಗಳು ಮುದ್ದಿಗೆ ಕೂಗುತ್ತಿದ್ದುದು "ಬಿಲೆ" ಎಂದು.

ನರೇಂದ್ರನು ತುಂಬಾ ತುಂಟ ಹುಡುಗ. ಗದರಿಸಿದರೆ ಸುಮ್ಮನಾಗುವ ಸ್ವಭಾವವೇ ಅಲ್ಲ ಅವನದು. ಅವನನ್ನು ಸುಮ್ಮನಿರಿಸಲು ಆಸೆ ಅಂಜಿಕೆ ಇವುಗಳೆಲ್ಲ ವ್ಯರ್ಥವಾಗುತ್ತಿತ್ತು. ತಾಯಿಗೆ ಉಪಾಯ ತೋರದೆ ತಲೆಯ ಮೇಲೆ ತಣ್ಣೀರನ್ನು ಚೆಲ್ಲಿ ಶಿವಶಿವ ಎನ್ನುವಳು. ಆಗ ನರೇಂದ್ರನು ಸುಮ್ಮನಾಗುತ್ತಿದ್ದನು. ಕೆಲವು ವೇಳೆ ತಾಯಿಗೆ ಸಹನೆ ಮೀರಿ "ನಾನು ದೇವರನ್ನು ಒಂದು ಮಗುವನ್ನು ಕರುಣಿಸೆಂದು ಬೇಡಿದರೆ ತನ್ನ ಭೂತಗಣದಿಂದ ಯಾವುದೋ ಒಂದನ್ನು ಇಲ್ಲಿಗೆ ಕಳುಹಿಸಿರುವನು." ಎನ್ನುತ್ತಿದ್ದರು. "ಬಿಲೆ! ನೀನು ಹೀಗೆಲ್ಲ ತುಂಟಿ ಮಾಡಿದರೆ ಶಿವನು ನಿನ್ನನ್ನು ಕೈಲಾಸಕ್ಕೆ ಸೇರಿಸುವುದಿಲ್ಲ" ಎನ್ನುವರು. ಆಗ ನರೇಂದ್ರ ಸುಮ್ಮನಾಗಿ ತಾಯಿ ಹೇಳಿದಂತೆ ಕೇಳುತ್ತಿದ್ದನು. ಆದರೂ ಇವನನ್ನು ಸುಧಾರಿಸುವುದಕ್ಕೆ, ತಾಯಿ, ಇಬ್ಬರು ದಾದಿಯರನ್ನು ಗೊತ್ತು ಮಾಡಬೇಕಾಯಿತು.

ಬಾಲ್ಯದಿಂದಲೇ ಮಗುವಿಗೆ ಸಾಧು ಸಂತರನ್ನು ಕಂಡರೆ ಬಹು ಪ್ರೀತಿ. ಒಂದು ದಿನ ಬೈರಾಗಿಯೊಬ್ಬನು ಒಂದು ಮಗುವನ್ನು ಭಿಕ್ಷೆ ಬೇಡಿದನು. ನರೇಂದ್ರನ ಹತ್ತಿರ ಕೊಡುವುದಕ್ಕೆ ಏನೂ ಇರಲಿಲ್ಲ. ಹೊಸದಾದ ಒಂದು ಪಂಚೆಯನ್ನು ಉಟ್ಟಿದ್ದನು. ಅದನ್ನೇ ಆ ಬೈರಾಗಿಗೆ

ಕೊಟ್ಟುಬಿಟ್ಟನು. ಬೈರಾಗಿ ಅದನ್ನು ಸಂತೋಷದಿಂದ ತಲೆಗೆ ಸುತ್ತಿ ಮಗುವನ್ನು ಹರಸಿ ಹೊರಟುಹೋದ. ಅಂದಿನಿಂದ ಯಾರಾದರೂ ಭಿಕ್ಷುಕರು ಬಂದರೆ ನರೇಂದ್ರನನ್ನು ಒಂದು ಕೋಣೆಯಲ್ಲಿ ಕೂಡುಹಾಕುತ್ತಿದ್ದರು. ಅಲ್ಲಾದರೂ ಸುಮ್ಮನಿರುತ್ತಿದ್ದನೆ? ಕೋಣೆಯಲ್ಲಿ ಏನಿದ್ದರೆ ಅದನ್ನು ಕಿಟಿಕಿಯಿಂದ ಭಿಕ್ಷುಕರಿಗೆ ಎಸೆಯುತ್ತಿದ್ದನು.

ತನ್ನ ಅಕ್ಕಂದಿರನ್ನು ಕಾಡುವುದೆಂದರೆ ನರೇಂದ್ರನಿಗೆ ತುಂಬಾ ಇಷ್ಟ. ಅವರು ಅಟ್ಟಿಸಿಕೊಂಡು ಬಂದರೆ ನರೇಂದ್ರನು ಒಂದು ಚರಂಡಿಯಲ್ಲಿ ನಿಂತು ಅಣಕಿಸುವನು. ಅವರು ಇವನ ಹತ್ತಿರ ಬರುವುದು ಹೇಗೆ? ಮೈಲಿಗೆ ಆಗುತ್ತದೆ ಎಂಬ ಭಯ. ಬೈಯುತ್ತ ಹಿಂತಿರುಗುತ್ತಿದ್ದರು.

ನರೇಂದ್ರನಿಗೆ ಪ್ರಾಣಿಗಳನ್ನು ಕಂಡರೆ ತುಂಬ ಇಷ್ಟ. ಮನೆಯ ಹಸು, ಅದರ ಪುಟ್ಟ ಕರು ಇವನ ಆಟದ ಗೆಳೆಯರು. ಜೊತೆಗೆ ಕೋತಿ, ಕುರಿಮರಿ, ನವಿಲು ಮುಂತಾದುವು ಬೇರೆ ಇದ್ದುವು. ಗಾಡಿ ಹೊಡೆಯುವುದೆಂದರೆ ಇವನಿಗೆ ತುಂಬಾ ಇಷ್ಟ. ದೊಡ್ಡ ರುಮಾಲು ಸುತ್ತಿ, ಕೈಯಲ್ಲಿ ಚಾವಟಿ ಹಿಡಿದುಕೊಂಡು ಎಲ್ಲರಿಗಿಂತ ಮೇಲೆ ಕುಳಿತುಕೊಳ್ಳುವ ಗಾಡಿ ಹೊಡೆಯುವವನು ಮಗುವಿನ ದೃಷ್ಟಿಗೆ ದೊಡ್ಡ ಮನುಷ್ಯ. ಒಂದು ಕಾಲದಲ್ಲಿ ತಾನೂ ಗಾಡಿ ಹೊಡೆಯುವವನಾಗಬೇಕೆಂದು ಬಯಸಿದ್ದನು.

ನರೇಂದ್ರನಿಗೆ ವಿದ್ಯಾಭ್ಯಾಸ ಮೊದಲಾದುದು ತಾಯಿಯ ತೊಡೆಯ ಮೇಲೆ. ಅಕ್ಷರಗಳನ್ನು ಮೊದಲು ತಾಯಿಂದ ಕಲಿತನು. ಆಕೆ ಮಗುವನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ರಾಮಾಯಣ ಮಹಾಭಾರತಗಳಿಂದ ಕಥೆಗಳನ್ನು ಹೇಳುತ್ತಿದ್ದಳು. ಕೆಲವು ವೇಳೆ ಅದು ಅರ್ಜುನನ ಪೌರುಷವಾಗಿರಬಹುದು; ಕರ್ಣನ ತ್ಯಾಗವಾಗಿರಬಹುದು, ಪ್ರಹ್ಲಾದನ ಭಕ್ತಿಯಾಗಿರಬಹುದು; ಸೀತೆಯ ಪಾತಿವ್ರತ್ಯವಾಗಿರಬಹುದು. ಎಳೆಯ ವಯಸ್ಸಿನಲ್ಲಿ ಕೇಳಿದ ಇಂತಹ ಕಥೆಗಳು ಬಂಡೆಯ ಮೇಲೆ ಕೊರೆದ ಅಕ್ಷರದಂತೆ ಆದವು. ತಾನೂ ಮುಂದೆ ಅವರಂತೆ ಆಗಬೇಕೆಂದು ಬಯಸಿದನು.

ರಾಗವಾಗಿ ರಾಮಾಯಣವನ್ನು ಓದುವುದೆಂದರೆ ನರೇಂದ್ರನಿಗೆ

ತುಂಬ ಪ್ರೀತಿ. ಹನುಮಂತ ಎಲ್ಲಿರುವನು ಎಂದು ಒಂದು ಬಾರಿ ಪುರಾಣದ ಆಚಾರ್ಯರನ್ನು ಕೇಳಿದನು. ಅವರು ತಮಾಷೆಗಾಗಿ "ರಾತ್ರಿ ಬಾಳೆ ಹಣ್ಣಿನ ತೋಟದಲ್ಲಿ ಕಾದರೆ ಅವನು ಹಣ್ಣು ತಿನ್ನಲು ಅಲ್ಲಿಗೆ ಬರುತ್ತಾನೆ" ಎಂದರು. ನರೇಂದ್ರ ಒಂದು ದಿನ ರಾತ್ರಿ ಬಹಳ ಹೊತ್ತಿನ ವರೆಗೆ ಕಾದು ಹನುಮಂತನನ್ನು ಕಾಣದೆ ಹಿಂತಿರುಗಿದನು. ತಾಯಿಯನ್ನು ಬೆಳಿಗ್ಗೆ ಕೇಳಿದಾಗ ಅವರು ಮತ್ತಷ್ಟು ತಮಾಷೆ ಮಾಡುವುದಕ್ಕಾಗಿ "ಹನುಮಂತ ಯಾರೋ ಭಕ್ತರ ಮನೆಗೆ ಹೋಗಿದ್ದನೇನೋ ಇನ್ನೊಂದು ದಿನ ಕಾದರೆ ಬರಬಹುದು" ಎಂದರು. ಮಗುವು ಮಾರನೆ ದಿನವೂ ಕಾದು, ಇದೆಲ್ಲ ಶುದ್ಧ ಸುಳ್ಳು ಎಂಬ ನಿರ್ಧಾರಕ್ಕೆ ತಾನೆ ಬಂದಿತು.

ಸೀತಾರಾಮರ ಮೇಲೆ ನರೇಂದ್ರನಿಗೆ ತುಂಬಾ ಭಕ್ತಿ. ಒಂದು ದಿನ ಪೇಟೆಯಿಂದ ಒಂದು ಮಣ್ಣಿನ ಸೀತಾರಾಮರ ವಿಗ್ರಹವನ್ನು ತಂದನು. ಭಕ್ತಿಯಿಂದ ಅದನ್ನು ಪೂಜಿಸಿದನು. ಒಬ್ಬ ಹುಡುಗನೊಂದಿಗೆ ಮಹಡಿಯ ಮೇಲೆ ಒಂದು ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಕುಳಿತನು. ಸ್ವಲ್ಪ ಹೊತ್ತಾದ ಮೇಲೆ ನರೇಂದ್ರ ಮನೆಯಲ್ಲಿ ಕಾಣಲಿಲ್ಲ. ಮನೆಯಲೆಲ್ಲ ಹುಡುಕಿದರು. ಕೊನೆಗೆ ಇವರಿದ್ದ ಕೊಠಡಿಗೆ ಬಂದು ಬಾಗಿಲನ್ನು ತಟ್ಟಿದರು. ಬಾಗಿಲನ್ನು ತೆರೆದನು. ಆದರೆ ನರೇಂದ್ರನಾದರೋ ದೀರ್ಘ ಧ್ಯಾನದಲ್ಲಿ ಮುಳುಗಿದ್ದನು. ಒಂದು ದಿನ ಗೃಹಸ್ಥ ಜೀವನವನ್ನು ಯಾರೋ ತುಂಬ ಹಳಿದರು. ಇದು ನರೇಂದ್ರನ ಮನಸ್ಸಿಗೆ ತಾಕಿತು. ಮದುವೆ ಕೆಟ್ಟದ್ದಾದರೆ ರಾಮನೇಕೆ ಮದುವೆಯಾಗಬೇಕು ಎಂದು ಸೀತಾರಾಮರ ವಿಗ್ರಹವನ್ನು ಆಚೆಗೆ ಎಸೆದನು. ಅಂದಿನಿಂದ ಪೂಜಿಸುವುದಕ್ಕೆ ಯೋಗಿರಾಜನಾದ ಶಿವನನ್ನು ತಂದನು.

ಪ್ರತಿದಿನವೂ ರಾತ್ರಿ ಮಲಗಿಕೊಳ್ಳುವಾಗ ನರೇಂದ್ರನ ಹುಬ್ಬಿನ ನಡುವೆ ಒಂದು ಬೆಳಕು ಕಾಣುತ್ತಿತ್ತು. ಕ್ರಮೇಣ ಅದು ದೊಡ್ಡದಾಗಿ ದೇಹವನ್ನೆಲ್ಲ ವ್ಯಾಪಿಸುತ್ತಿತ್ತು. ಇದು ಎಲ್ಲರಿಗೂ ಆಗುವ ಒಂದು ಅನುಭವವೆಂದು ಮೊದಲು ನರೇಂದ್ರನು ತಿಳಿದಿದ್ದನು. ಒಂದು ದಿನ ತನ್ನ

ಸ್ನೇಹಿತನನ್ನು ನೀನು ಮಲಗಿಕೊಳ್ಳುವಾಗ ಒಂದು ಬೆಳಕನ್ನು ನೋಡು ವೆಯಾ? ಎಂದು ಪ್ರಶ್ನಿಸಿದನು. ಅವನು ಇಲ್ಲವೆಂದನು. ಈ ಅನುಭವ ಅಧ್ಯಾತ್ಮಿಕ ಸಾಧನೆಯಲ್ಲಿ ನರೇಂದ್ರನು ತುಂಬಾ ಮುಂದುವರಿದಿದ್ದನು ಎಂಬುದನ್ನು ತೋರುತ್ತಿತ್ತು. ಆದಕಾರಣವೇ ಮುಂದೆ ಇವರು ಶ್ರೀ ರಾಮಕೃಷ್ಣ ರನ್ನು ನೋಡಿದಾಗ, ನೀನು ಮಲಗಿಕೊಳ್ಳುವಾಗ ಬೆಳಕನ್ನು ನೋಡು ತ್ತೀಯ ಎಂದು ಅವರು ಕೇಳಿದರು.

ಸಾಧಾರಣವಾಗಿ ಮಕ್ಕಳು ಹಲವು ಆಟಗಳನ್ನು ಆಡುವುವು. ಆದರೆ ನರೇಂದ್ರನು ಈ ಆಟದ ಜೊತೆಗೆ ದೇವರ ಧ್ಯಾನವನ್ನೂ ಒಂದು ಆಟದಂತೆ ಭಾವಿಸಿದ್ದನು. ಒಂದು ದಿನ ಕೆಲವು ಹುಡುಗರು ಒಟ್ಟಿಗೆ ಸೇರಿ ಒಂದು ಹಳೆಯ ಕೋಣೆಯಲ್ಲಿ ದೇವರನ್ನು ಧ್ಯಾನ ಮಾಡಲು ಕುಳಿತರು. ಸ್ವಲ್ಪ ಹೊತ್ತಿನಲ್ಲಿ ಒಂದು ನಾಗರ ಹಾವು ಹೆಡೆ ಎತ್ತಿ ಕೊಂಡು ಅಲ್ಲಿಗೆ ಬಂದಿತು. ಉಳಿದ ಹುಡುಗರೆಲ್ಲ ಇದನ್ನು ಕಂಡೊಡನೆಯೆ ಪರಾರಿಯಾದರು. ನರೇಂದ್ರನು ಕದಲಲಿಲ್ಲ. ಎಲ್ಲರೂ ಹಾವು! ಎಂದು ಅರಚಿಕೊಂಡರು. ಆದರೂ ನರೇಂದ್ರನಿಗೆ ಪ್ರಜ್ಞೆ ಇಲ್ಲ. ಅವನು ಧ್ಯಾನದಲ್ಲಿ ತಲ್ಲೀನನಾಗಿದ್ದನು. ಅನಂತರ, ಏತಕ್ಕೆ ನೀನು ಓಡಿಹೋಗ ಲಿಲ್ಲವೆಂದು ಕೇಳಿದರು. ನನಗೆ ಯಾವುದೂ ಗೊತ್ತಿಲ್ಲ. ನನ್ನ ಮನಸ್ಸು ಯಾವುದೋ ಆನಂದದಲ್ಲಿ ತಲ್ಲೀನವಾಗಿತ್ತು ಎಂದನು. ಯಾವ ಮನ ಸ್ಸಿನ ಏಕಾಗ್ರತೆಯನ್ನು ಹಲವು ವರುಷಗಳು ಕಷ್ಟಪಟ್ಟು ಸಾಧಿಸಬೇ ಕೋ ಅದು ಇವರಿಗೆ ಲೀಲಾಜಾಲವಾಗಿತ್ತು. ಆದಕಾರಣವೆ ಶ್ರೀ ರಾಮಕೃಷ್ಣರು ನರೇಂದ್ರನನ್ನು ಧ್ಯಾನಸಿದ್ಧನೆಂದು ಕರೆದರು. ಇವರು ಹುಟ್ಟುವಾಗಲೆ ಧ್ಯಾನದಲ್ಲಿ ಸಿದ್ಧರಾಗಿ ಬಂದಿದ್ದರು.

ನರೇಂದ್ರನಿಗೆ ಆರು ವರುಷ ತುಂಬುತ್ತಲೆ ಅವನನ್ನು ಪಾಠಶಾಲೆಗೆ ಹಾಕಿದರು. ಶಾಲೆ ಒಂದು ದೊಡ್ಡಿ. ಅಲ್ಲಿ ನಾನಾ ಬಗೆಯ ಹುಡುಗರು ಸೇರುತ್ತಿದ್ದರು. ಅವರೊಂದಿಗೆಲ್ಲ ಬೆರೆತಾಗ ಪಾಠಕ್ಕಿಂತ ಹೆಚ್ಚಾಗಿ ಅವರು ಪದೇ ಪದೇ ಉಪಯೋಗಿಸುತ್ತಿದ್ದ ಬೈಗಳನ್ನು ಕಲಿತನು. ಇದನ್ನು ನೋಡಿ ಅವನನ್ನು ಶಾಲೆಯಿಂದ ಬಿಡಿಸಿ ಮನೆಯಲ್ಲಿಯೇ ಒಬ್ಬ ಮೇಷ್ಟ

ರನ್ನು ಇಟ್ಟು ಪಾಠ ಹೇಳಲು ಮೊದಲು ಮಾಡಿದರು. ಹುಡುಗನು ತುಂಬಾ ಬುದ್ಧಿವಂತ. ಉಳಿದ ಹುಡುಗರು ಇನ್ನೂ ಅಕ್ಷರ ಕಲಿಯುವ ಹೊತ್ತಿಗೆ ನರೇಂದ್ರನು ಪುಸ್ತಕಗಳನ್ನು ಓದಲು ಮೊದಲು ಮಾಡಿದನು. ಏಳನೆಯ ವರುಷದ ಹೊತ್ತಿಗೆ ಸಂಸ್ಕೃತ ವ್ಯಾಕರಣ, ರಾಮಾಯಣ ಮಹಾಭಾರತದ ಕೆಲವು ಭಾಗಗಳನ್ನು ಕಂಠಪಾಠ ಮಾಡಿದ್ದನು. ಒಂದು ಸಲ ಯಾರೋ ಬೈರಾಗಿಗಳು ಇವರ ಮನೆಗೆ ಒಂದು ರಾಮಾಯಣ ವನ್ನು ಹೇಳುತ್ತಿದ್ದರು. ಅದರಲ್ಲಿ ಎಷ್ಟೋ ತಪ್ಪುಗಳು ಇದ್ದುವು. ನರೇಂದ್ರನು ಅವರನ್ನು ತಿದ್ದಿದನು. ಈ ಸಣ್ಣ ಮಗುವಿಗೆ ಆಗಲೆ ಇಷ್ಟೊಂದು ಗೊತ್ತಿದೆಯಲ್ಲ ಎಂದು ಅವರು ಆಶ್ಚರ್ಯಪಟ್ಟರು.

ಹಲವು ಮಕ್ಕಳು ಸೇರಿ ಮನೆಯಲ್ಲಿ ರಾಜನ ದರ್ಬಾರ್ ಆಟವನ್ನು ಆಡುತ್ತಿದ್ದರು. ಅಂಗಳದಿಂದ ದೇವರ ಮನೆಗೆ ಹೋಗುವಾಗ ಇದ್ದ ಮೆಟ್ಟಲಸಾಲೆ ಸಿಂಹಾಸನ. ನರೇಂದ್ರನೆ ರಾಜ. ಅವನು ಮೇಲಿನ ಮೆಟ್ಟಲಿನಲ್ಲಿ ಕುಳಿತುಕೊಳ್ಳುತ್ತಿದ್ದನು. ಕೆಳಗಿನ ಮೆಟ್ಟಲಿನಲ್ಲಿ ಮಂತ್ರಿ, ಸೇನಾಧಿಪತಿ, ನ್ಯಾಯಾಧಿಪತಿಗಳು ತಮ್ಮ ತಮ್ಮ ದರ್ಜೆಗೆ ತಕ್ಕಂತೆ ಕುಳಿತುಕೊಳ್ಳುತ್ತಿದ್ದರು. ಇವರು ಎಷ್ಟೋ ವಿಷಯಗಳನ್ನು ತೀರ್ಮಾನ ಮಾಡುತ್ತಿದ್ದರು! ಯಾರಾದರೂ ಸ್ವಲ್ಪ ಗಲಾಟೆ ಮಾಡಿದರೆ ತಕ್ಷಣವೇ ನರೇಂದ್ರನು ಅವರ ಕಡೆ ನೋಡುವನು. ಅವರು ತಕ್ಷಣವೆ ಸುಮ್ಮನಾಗು ವರು. ಇವನನ್ನು ವಿರೋಧಿಸುವುದಕ್ಕೆ ಯಾರಿಗೂ ಶಕ್ತಿ ಇರಲಿಲ್ಲ. ಕೆಲವರು ಹುಟ್ಟುವಾಗಲೇ ನಾಯಕರಾಗಿ ಬರುವರು. ಯಾವ ಅಧಿಕಾರ ವಿಲ್ಲದೆ ಇದ್ದರೂ ಅವರು ಏನನ್ನಾದರೂ ಹೇಳಿದರೆ ಉಳಿದವರು ತಗ್ಗಿ ನಡೆಯುವರು. ಅವರ ವಾಣಿಯಲ್ಲಿ ಅಂತಹ ಸತ್ವವಿದೆ. ಅವರ ಜೀವನ ದಲ್ಲಿ ಅಂತಹ ಪರಿಪಕ್ವವಿದೆ.

ನರೇಂದ್ರನ ತಂದೆಯ ಬಳಿಗೆ ಎಲ್ಲಾ ಜಾತಿಯ ಕಕ್ಷಿಗಾರರು ಬರುತ್ತಿದ್ದರು. ಆಯಾ ಜಾತಿಯವರು ಸೇದಲು ಬೇರೆ ಬೇರೆ ಗುಡಿ ಗುಡಿಯನ್ನು ಇಟ್ಟಿದ್ದರು. ನರೇಂದ್ರನಿಗೆ ಜಾತಿ ಎಂದರೆ ಏನೋ ಒಂದು ರಹಸ್ಯವಾಗಿತ್ತು. ಯಾತಕ್ಕೆ ಒಂದು ಜಾತಿಯವನು ಮತ್ತೊಂದು ಜಾತಿ

ಯವರ ಗುಡಿಗುಡಿಯನ್ನು ಸೇದಬಾರದು. ಸೇದಿದರೆ ಏನು ಅನಾರ್ಥವಾಗು ವುದು ಎಂದು ವಿಚಾರಿಸ ತೊಡಗಿದನು. ಒಂದು ದಿನ ಯಾರೂ ಇಲ್ಲದ ವೇಳೆಯಲ್ಲಿ ಆಯಾ ಜಾತಿಯವರಿಗೆ ಇಟ್ಟಿದ್ದ ಬೇರೆ ಬೇರೆ ಗುಡಿಗುಡಿ ಯಿಂದ ಒಂದಾದ ಮೇಲೊಂದನ್ನು ಸೇದುತ್ತಾ ಬಂದನು. ಯಾವ ಅಟ್ಟವೂ ಕೆಳಕ್ಕೆ ಬೀಳಲಿಲ್ಲ! ಏನು ಅನಿಷ್ಟವೂ ಆಗಲಿಲ್ಲ! ಯಾರೋ ಹಾಗೆ ಮಾಡಬಾರದೆಂದು ಗದರಿಸಿದರು. ನರೇಂದ್ರನು ಇದರಿಂದ ಯಾವ ವ್ಯತ್ಯಾಸವೂ ನನಗೆ ಕಾಣುವುದಿಲ್ಲವಲ್ಲ ಎಂದನು.

ದೊಡ್ಡವರು ಏನು ಹೇಳಿದರೆ ಅದನ್ನು ವಿಚಾರ ಮಾಡದೆ ಒಪ್ಪಿ ಕೊಳ್ಳುವ ಕಾಲ ಅದು. ಆದರೆ ನರೇಂದ್ರನು ಯಾವುದನ್ನೂ ವಿಮರ್ಶೆ ಮಾಡದೆ ಒಪ್ಪುತ್ತಿರಲಿಲ್ಲ. ಪಕ್ಕದ ಮನೆಯಲ್ಲಿ ಒಂದು ದೊಡ್ಡ ಮರ ವಿತ್ತು. ಅಲ್ಲಿಗೆ ಆಗಿಂದಾಗ್ಗೆ ಹೋಗಿ ಹುಡುಗರೊಂದಿಗೆ ಮರಕೋತಿ ಯಾಡುತ್ತಿದ್ದನು. ಆ ಮನೆ ಯಜಮಾನನಿಗೆ ಇವರ ಕಾಟ ತಾಳಲಾಗ ಲಿಲ್ಲ. ಇವರನ್ನು ಗದರಿಸುವುದಕ್ಕಾಗಿ ಆ ಮರದಲ್ಲಿ ಒಂದು ಬ್ರಹ್ಮದೈತ್ಯ ನಿರುವನು; ಮರ ಹತ್ತಿದವರ ಕತ್ತನ್ನು ಅದು ಹಿಸುಕುವುದು ಎಂದು ಅಂಜಿಸಿದನು. ಹುಡುಗರಿಗೆ ಅಂಜಿಕೆಯಾಯಿತು. ಎಲ್ಲರೂ ಕೆಳಗೆ ಇಳಿದರು. ಯಜಮಾನರು ಮನೆಯ ಒಳಗಡೆ ಹೋದೊಡನೆಯೇ ನರೇಂದ್ರನು ಪುನಃ ಮರವನ್ನು ಹತ್ತಿದನು. ಉಳಿದವರು ಬೇಡ ಎಂದರು. "ಹುಚ್ಚರ! ಬ್ರಹ್ಮದೈತ್ಯನಿದ್ದಿದ್ದರೆ ನನ್ನನ್ನು ಯಾವತ್ತೋ ಕೊಲ್ಲಬೇಕಾಗಿ ತ್ತಲ್ಲ!" ಎಂದು ನಕ್ಕುಬಿಟ್ಟನು. ಇದೊಂದು ಬಾಲ್ಯದ ಆಟವಾಗಿರ ಬಹುದು. ಆದರೆ ಮಗುವಿನ ಶೀಲ ಎಂತಹುದು ಎನ್ನುವುದನ್ನು ಇದು ತೋರುವುದು. ಈ ಮಗುವೆ ಮುಂದೆ ಸ್ವಾಮಿ ವಿವೇಕಾನಂದರಾಗಿ ಬೋಧಿಸುವಾಗ, "ಒಂದು ವಿಷಯವನ್ನು ನೀವು ಪುಸ್ತಕದಲ್ಲಿ ಓದು ತ್ತೀವೆ ಎಂದು ನಂಬಬೇಡಿ. ಸತ್ಯವನ್ನು ನೀವೆ ಹುಡುಕಿ ನೀವೆ ಅನುಭ ವಿಸಿ, ಅದು ಸಾಕ್ಷಾತ್ಕಾರ" ಎಂದರು.

ಸ್ವಲ್ಪ ಓದುವುದು ಬರೆಯುವುದು ಚೆನ್ನಾಗಿ ಬಂದಮೇಲೆ ನರೇಂ ದ್ರನನ್ನು ಮಾಧ್ಯಮಿಕ ಶಾಲೆಗೆ ಹಾಕಿದರು. ಅಲ್ಲಿಯೂ ಇವರ ಚೇಷ್ಟೆಗೆ

ಲಗಾಮಿರಲಿಲ್ಲ. ಒಂದು ದಿನ ಮೇಷ್ಟರು ಪಾಠ ಮಾಡುತ್ತಿದ್ದಾಗ ಕೆಲವು ಹುಡುಗರು ಗದ್ದಲ ಮಾಡುತ್ತಿದ್ದರು. ಮೇಷ್ಟರು ಹುಡುಗರನ್ನು ಕುರಿತು "ನಾನು ಈಗ ಏನು ಹೇಳಿದೆ ಅದನ್ನು ಹೇಳಿ" ಎಂದು ಕೇಳಿದರು. ಆ ಹುಡುಗರ ಪೈಕಿ ಯಾರೂ ಹೇಳಲಿಲ್ಲ. ನರೇಂದ್ರನಾದರೊ ಸ್ವಲ್ಪವೂ ತಪ್ಪದೆ ಎಲ್ಲವನ್ನೂ ಹೇಳಿದನು. ಉಳಿದ ಹುಡುಗರು ಬೆಂಚಿನ ಮೇಲೆ ನಿಲ್ಲಬೇಕಾಯಿತು. ನರೇಂದ್ರನು ನಿಂತುಕೊಳ್ಳಬೇಕಾಗಲಿಲ್ಲ. ಆದರೆ ನರೇಂದ್ರನು ನಾನು ಕೂಡ ಮಾತನಾಡುತ್ತಿದ್ದೆ ಎಂದು ಇತರರಂತೆ ಬೆಂಚಿನ ಮೇಲೆ ನಿಂತನು.

ನರೇಂದ್ರನಿಗೆ ಬಾಲ್ಯದಿಂದಲೇ ಸನ್ಯಾಸ ಜೀವನದಲ್ಲಿ ಆಸಕ್ತಿ. ತಾನು ಸನ್ಯಾಸಿಯಾಗುವೆನು, ಜೋತಿಷ್ಯನೊಬ್ಬನು ನನ್ನ ಕೈಯನ್ನು ನೋಡಿ ಹೇಳಿರುವನು ಎಂದು ತನ್ನ ಗೆಳೆಯರೊಂದಿಗೆ ಹೇಳುತ್ತಿದ್ದನು. ಪ್ರಪಂಚದ ಸುಖವನ್ನು ನಾನಾಬಗೆಯಲ್ಲಿ ಅನುಭವಿಸಬೇಕೆಂದು ಕನಸು ಕಟ್ಟುವ ಕಾಲ ಅದು. ಆದರೆ ಈ ಮಗುವಿನಲ್ಲಿ ಆಗಲೆ ತೀವ್ರ ವೈರಾಗ್ಯದ ಚಿಹ್ನೆಗಳು ಕಾಣಬರುತ್ತಿದ್ದವು.

ಬಾಲ್ಯದಿಂದಲೇ ಕೆಚ್ಚೆದೆಯವನು ನರೇಂದ್ರ. ಯಾರು ಬೆದರಿಸಿದರೂ ಅಂಜುವವನಲ್ಲ. ಎಂತಹ ಪ್ರಸಂಗದಲ್ಲಿಯೂ ತಗ್ಗುವವನಲ್ಲ. ಅವನು ಆಗ ಓದುತ್ತಿದ್ದುದು ಈಶ್ವರಚಂದ್ರ ವಿದ್ಯಾಸಾಗರನ ಪಾಠಶಾಲೆಯಲ್ಲಿ. ಅಲ್ಲಿಯ ಮೇಷ್ಟರೊಬ್ಬರು ತುಂಬ ಮುಂಗೋಪಿಗಳು. ಮಕ್ಕಳನ್ನು ಹಲವು ವೇಳೆ ಹೊಡೆಯುತ್ತಿದ್ದರು. ಒಂದು ದಿನ ಮೇಷ್ಟರು ಕೋಪದಿಂದ ಮುಖವನ್ನು ಕೆಂಪಗೆ ಮಾಡಿಕೊಂಡು ಒಬ್ಬ ಹುಡುಗನನ್ನು ಹೊಡೆಯುತ್ತಿದ್ದರು. ಇವರನ್ನು ನೋಡಿ ನರೇಂದ್ರನಿಗೆ ನಗು ಬಂದಿತು. ತಕ್ಷಣವೇ ಮೇಷ್ಟರ ಕೋಪ ನರೇಂದ್ರನ ಮೇಲೆ ತಿರುಗಿತು. ಇವನನ್ನು ಹೊಡೆಯಲು ಮೊದಲು ಮಾಡಿದರು. ಇನ್ನು ಮೇಲೆ ನಗುವುದಿಲ್ಲ ಎಂದು ಮಾತುಕೊಡು ಎಂದರು. ನರೇಂದ್ರನು ಮಾತನ್ನು ಕೊಡಲಿಲ್ಲ. ಮೇಷ್ಟರು ಇವನ ಕಿವಿಯನ್ನು ಹಿಡಿದು ಎತ್ತಿದರು. ಕಿವಿಯಿಂದ ರಕ್ತ ಬಂದಿತು. ನರೇಂದ್ರನು ಮೇಷ್ಟರನ್ನು ಕುರಿತು "ನನ್ನ

ಕಿವಿಯನ್ನು ಎಳೆಯಬೇಡಿ. ನೀವು ಯಾರು ನನ್ನನ್ನು ಹೊಡೆಯುವು
ದಕ್ಕೆ? ನನ್ನನ್ನು ಮುಟ್ಟಿದರೆ ಜೋಕೆ!" ಎಂದನು. ಅಷ್ಟುಹೊತ್ತಿಗೆ
ಈಶ್ವರಚಂದ್ರ ವಿದ್ಯಾಸಾಗರನು ಬಂದನು. ನರೇಂದ್ರನು ನಡೆದ ಸಂಗತಿ
ಯನ್ನೆಲ್ಲ ಹೇಳಿದನು. ಇನ್ನು ಮೇಲೆ ನಿಮ್ಮ ಸ್ಕೂಲಿಗೆ ಬರುವುದಿಲ್ಲ
ಎಂದು ಪುಸ್ತಕವನ್ನು ತೆಗೆದುಕೊಂಡು ಹೋಗುವುದರಲ್ಲಿದ್ದನು. ಈಶ್ವರ
ಚಂದ್ರ ವಿದ್ಯಾಸಾಗರನು ಅವನನ್ನು ತನ್ನ ಕೋಣೆಗೆ ಕರೆದುಕೊಂಡು
ಹೋಗಿ ಹುಡುಗನನ್ನು ಸಮಾಧಾನ ಮಾಡಿ ಕಳುಹಿಸಿದನು. ಮಾರನೆ
ದಿನದಿಂದ ಯಥಾಪ್ರಕಾರ ಸ್ಕೂಲಿಗೆ ಬರತೊಡಗಿದನು. ಹಿಂದಿನದನ್ನೆಲ್ಲ
ಸಂಪೂರ್ಣ ಮರೆತಿದ್ದನು.

ವಿಪರೀತ ಚಟುವಟಿಕೆ ನರೇಂದ್ರನದು. ಸಾಧಾರಣ ಹುಡುಗರಿಗೆ
ಸಾಕಾಗುವ ಸ್ವಲ್ಪ ಆಟಪಾಠಗಳು ಇವನಿಗೆ ಸಾಲವು. ಸದಾ ಏನನ್ನಾ
ದರೂ ಹೊಸದನ್ನು ಕಂಡುಹಿಡಿಯುವುದರಲ್ಲಿ ಸ್ವಲ್ಪ ಆಸೆ. ಮನೆಯಲ್ಲಿ
ಕೆಲವು ಹುಡುಗರೆಲ್ಲ ಸೇರಿ ಒಂದು ನಾಟಕ ಸಂಘ ಮಾಡಿದರು. ಇವರು
ಕೆಲವು ನಾಟಕಗಳನ್ನು ಆಡಲು ಮೊದಲು ಮಾಡಿದಮೇಲಂತೂ ಮನೆಯಲ್ಲಿ
ಶಾಂತಿಯೇ ಇಲ್ಲ. ಇವರ ಚಿಕ್ಕಪ್ಪನಿಗೆ ಕೋಪ ಬಂದು ಒಂದು ದಿನ
ಪರದೆ ಮುಂತಾದುವನ್ನೆಲ್ಲ ಹರಿದು ಬಿಸುಟನು. ನರೇಂದ್ರನು ನಾಟಕ
ವನ್ನು ಬಿಟ್ಟು ಮನೆಯ ಅಂಗಳದಲ್ಲಿ ಒಂದು ಸರ್ಕಸ್ಸು ಪಾರ್ಟಿ ತಯಾರು
ಮಾಡಲು ಮೊದಲು ಮಾಡಿದನು. ಅಕ್ಕಪಕ್ಕದ ಹುಡುಗರೆಲ್ಲ ಅಲ್ಲಿಗೆ
ಬರಲು ಮೊದಲು ಮಾಡಿದರು. ಅದರಲ್ಲಿ ಒಬ್ಬ ಹುಡುಗನಿಗೆ ಕೈ ಮುರಿ
ಯಿತು. ಮತ್ತೊಂದು ಸಲ ಅವರ ಚಿಕ್ಕಪ್ಪ ಬಂದು ಅವರ ಸರ್ಕಸ್ಸಿನ
ಸಾಮಾಗ್ರಿಯನ್ನೆಲ್ಲ ಕಿತ್ತು ಬೀದಿಗೆ ಬಿಸಾಟನು. ಮನೆಯಲ್ಲಿ ಏನಾದರೂ
ಮಾಡಿದರೂ ಉಳಿಗಾಲವಿಲ್ಲವೆಂದು ನರೇಂದ್ರನು ತಿಳಿದು, ಹತ್ತಿರ ಇದ್ದ
ಗರಡಿ ಮನೆಗೆ ಸೇರಿದನು. ಇದರಲ್ಲಿ ಕತ್ತಿವರಸೆ, ಲಾಟಿ ತಿರುಗಿಸುವುದು,
ಕುಸ್ತಿ, ದೋಣಿ ನಡೆಸುವುದು ಮುಂತಾದುವನ್ನು ಕಲಿತನು. ಇದರಲ್ಲಿ
ಅವನಿಗೆ ಮೊದಲನೆಯ ಬಹುಮಾನವೂ ಬಂದಿತು. ಇವುಗಳಲ್ಲಿ ಬೇಜಾ
ರಾದರೆ ಒಂದು ದೀಪ ಚಿತ್ರದ ಸಲಕರಣೆಯನ್ನು ತಂದು ಮನೆಯೊಳಗೆ

ಚಿತ್ರಗಳನ್ನು ತೋರುತ್ತಿದ್ದನು. ಅಂತೂ ಒಂದಲ್ಲ ಒಂದು ಆಟ. ಒಂದಕ್ಕೆ ವಿಘ್ನ ಬಂದರೆ ಮತ್ತೊಂದಕ್ಕೆ ಪ್ರಯತ್ನ.

ನರೇಂದ್ರ ಎಲ್ಲರಿಗೂ ಬೇಕಾಗಿದ್ದವನು. ತನ್ನ ಗೆಳೆಯರೆಂದರೆ ಪ್ರಾಣ. ಅವರಿಗೆ ಏನಾದರೂ ಕಷ್ಟಕಾಲ ಬಂದರೆ ಇವನು ಮೊದಲು ಹೋಗಿ ಅವರಿಗೆ ಸಹಾಯ ಮಾಡುವನು. ನೆರೆಹೊರೆಯವರೆಲ್ಲರೂ ಇವನಿಗೆ ಪರಿಚಿತರೆ. ನೆರೆಮನೆಯ ಹೆಂಗಸರಲ್ಲಿ ಇವನಿಗೊಂದು ಸಲುಗೆ. ಎಲ್ಲರನ್ನೂ ಅವರ ವಯಸ್ಸಿಗೆ ತಕ್ಕಂತೆ ಅಕ್ಕ, ತಂಗಿ, ಚಿಕ್ಕಮ್ಮ ಎಂದು ಕರೆಯುವನು. ನಾಚಿಕೆಯೆನ್ನುವುದು ಇವನ ಸ್ವಭಾವಕ್ಕೆ ವಿರುದ್ಧ. ಈ ಸಮಯದಲ್ಲೆ ಅಡಿಗೆ ಮಾಡುವುದನ್ನು ಕಲಿತನು. ಸ್ನೇಹಿತರ ಕೈಯಲ್ಲಿ ಚಂದಾ ವಸೂಲಿ ಮಾಡಿ ತಾನೆ ಚೆನ್ನಾಗಿ ಅಡಿಗೆ ಮಾಡಿ ಬಡಿಸುತ್ತಿದ್ದನು.

ಶಾಲೆಗೆ ರಜಾ ಸಿಕ್ಕಿದ ದಿನಗಳಲ್ಲಿ ಸ್ನೇಹಿತರನ್ನು ಕಲ್ಕತ್ತೆಯಲ್ಲಿ ಯಾವುದಾದರೂ ನೋಡುವ ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಿದ್ದನು. ಒಂದು ದಿನ ಹುಡುಗರೆಲ್ಲ ಗಂಗಾನದಿಯ ಮೇಲೆ ದೋಣಿಯಲ್ಲಿ ಸ್ವಲ್ಪ ದೂರದಲ್ಲಿದ್ದ ಒಂದು ತೋಟವನ್ನು ನೋಡಲು ಹೋದರು. ಹಿಂತಿರುಗಿ ಬರುವಾಗ ಒಬ್ಬ ಹುಡುಗನಿಗೆ ಶರೀರದಲ್ಲಿ ತುಂಬಾ ಅಸ್ವಸ್ಥವಾಯಿತು. ದೋಣಿಯವರು ಆ ಹುಡುಗನನ್ನು ಇಳಿಸಿ, ದಡದ ಮೇಲೆ ನಡೆದುಕೊಂಡು ಹೋಗಿ ಎಂದು ಒತ್ತಾಯ ಮಾಡಿದರು. ನರೇಂದ್ರನು ಎರಡರಷ್ಟು ಬಾಡಿಗೆಯನ್ನು ಕೊಡುತ್ತೇವೆ ಎಂದನು. ಆದರೂ ಒಪ್ಪಲಿಲ್ಲ ಒಂದು ದಡದ ಹತ್ತಿರ ನಿಲ್ಲಿಸಿ ಗಲಾಟೆ ಮಾಡಲಾರಂಭಿಸಿದರು. ನರೇಂದ್ರನು ತಕ್ಷಣವೆ ದೋಣಿಯಿಂದ ಧುಮುಕಿ ಹತ್ತಿರ ಬರುತ್ತಿದ್ದ ಇಬ್ಬರು ಸಿಪಾಯಿಗಳನ್ನು ನೋಡಿದನು. ಅವರ ಹತ್ತಿರ ಹೋಗಿ ತನಗೆ ಬಂದ ಸ್ವಲ್ಪ ಇಂಗ್ಲೀಷಿನಲ್ಲಿಯೇ ವರ್ಣಿಸಿ ಅವರ ಕೈಯನ್ನು ಹಿಡಿದುಕೊಂಡು ದೋಣಿಯ ಸ್ಥಳಕ್ಕೆ ಕರೆದುಕೊಂಡು ಬಂದನು. ಸಿಪಾಯಿಗಳು ಇಂಗ್ಲೀಷಿನಲ್ಲಿ ಸ್ವಲ್ಪ ಗದರಿಸಿದರೋ ಇಲ್ಲವೋ ತಕ್ಷಣವೇ ದೋಣಿಯವರು ತೆಪ್ಪ

ಗಾದರು. ನರೇಂದ್ರನು ಸಿಪಾಯಿಗಳನ್ನು ವಂದಿಸಿ ಮನೆಗೆ ಹಿಂತಿರು ಗಿದನು.

ನರೇಂದ್ರನಿಗೆ ಸುಮಾರು ಹತ್ತು ವರುಷವಾದಾಗ ಕಲ್ಕತ್ತೆಗೆ ಒಂದು ಯುದ್ಧದ ಹಡಗು ಬಂದಿತು. ಇವನ ಗೆಳೆಯರೆಲ್ಲ ಇದನ್ನು ನೋಡುವುದಕ್ಕೆ ಕರೆದುಕೊಂಡು ಹೋಗು ಎಂದು ನರೇಂದ್ರನನ್ನು ಕಾಡಿ ದರು. ಅದನ್ನು ನೋಡಲು ಹೋಗಬೇಕಾದರೆ ಹಡಗಿನ ಯಜಮಾನನ ಅಪ್ಪಣೆ ಪಡೆಯಬೇಕಾಗಿತ್ತು. ಸರಿ! ನರೇಂದ್ರನೆ ಒಂದು ಅರ್ಜಿಯನ್ನು ತಯಾರು ಮಾಡಿ ಹಡಗಿನ ಅಧಿಕಾರಿಯನ್ನು ನೋಡಲು ಹೊರಟನು. ಬಾಗಿಲು ಕಾಯುವವನು ಈ ಮೋಟುದ್ದ ಹುಡುಗನನ್ನು ಬಿಡಲಿಲ್ಲ. ನರೇಂದ್ರನು ಹಿಂದಿನಿಂದ ಎಲ್ಲಾದರೂ ಮೇಲಕ್ಕೆ ಹೋಗುವುದಕ್ಕೆ ಸ್ಥಳ ವಿದೆಯೆ ಎಂದು ನೋಡಲು ಹೋದನು. ಹತ್ತಿರದಲ್ಲೆ ಹಿಂದೆ ಮಹಡಿಯ ಮೆಟ್ಟಲು ಇದ್ದಿತು. ಅದನ್ನು ಹತ್ತಿ ಮೇಲೆ ಹೋಗಿ ಮುಂದೆ ಇದ್ದ ತೆರೆ ಯನ್ನು ಸೂಕಿದಾಗ ಅದೇ ಹಡಗಿನ ಅಧಿಕಾರಿಯು ಇದ್ದ ಕೋಣೆಯಾ ಗಿತ್ತು. ನರೇಂದ್ರನು ತನ್ನ ಅರ್ಜಿಯನ್ನು ಕೊಟ್ಟೊಡನೆಯೇ ಅವನು ಸಹಿ ಮಾಡಿ ಕೊಟ್ಟನು. ಬರುವಾಗ ಎಲ್ಲರೂ ಬಂದು ಹೋಗುವ ದಾರಿಯಲ್ಲೆ ಬಂದನು. ಮೊದಲನೆ ಸಲ ಹೋದಾಗ ಬಿಡದೆ ಇದ್ದ ಜವಾನನು ನರೇಂ ದ್ರನನ್ನು ನೋಡಿ, "ಎಲಾ ನೀನು ಹೇಗೆ ಒಳಗೆ ಹೋದೆ?" ಎಂದು ಕೇಳಿದನು. ನರೇಂದ್ರನು "ಓ! ನಾನೊಬ್ಬ ಮಂತ್ರವಾದಿ!" ಎಂದು ನಗುತ್ತ ಬಂದುಬಿಟ್ಟನು.

ಒಂದು ದಿನ ಅವರ ಗರಡಿಯ ಮನೆಯ ವಾರ್ಷಿಕೋತ್ಸವ. ಮುಂದಿನ ರಸ್ತೆಯಲ್ಲಿ ಚಪ್ಪರ ಹಾಕಿದರು. ಹಲವು ಜನರು ನೋಡಲು ನೆರೆದರು. ಗರಡಿಯವರು ತಮ್ಮ ಕಸರತ್ತನ್ನು ತೋರಿಸಲು ಮೊದಲು ಮಾಡಿದರು. ಮಧ್ಯದಲ್ಲಿ ಟ್ರಿಪೀಜು ಎಂಬ ಕಸರತ್ತಿನ ಪಟ್ಟಿಗಳನ್ನು ಒಬ್ಬರು ಹೊತ್ತುಕೊಳ್ಳಬೇಕಾಗಿ ಬಂದಿತು. ಪ್ರೇಕ್ಷಕರಲ್ಲಿ ಬಲವಾದ ಒಬ್ಬ ನಾವಿಕನಿದ್ದನು. ನರೇಂದ್ರನು ಅವನನ್ನು ಕರೆದು ಹೊತ್ತುಕೊಳ್ಳ ಬೇಕೆಂದು ಕೇಳಿಕೊಂಡನು. ಅದನ್ನು ಹಿಡಿದುಕೊಂಡಿದ್ದಾಗ ಅಕಸ್ಮಾ

ತ್ತಾಗಿ ಬಿದ್ದುಬಿಟ್ಟನು. ಅವನ ಮೇಲೆ ಆ ಭಾರವೆಲ್ಲ ಬಿದ್ದು ನಾವಿಕನು ಮೂರ್ಛಿತನಾದನು. ಆತನು ಸತ್ತುಹೋದನೆಂದು ಅಲ್ಲಿದ್ದ ಹುಡುಗರೆಲ್ಲ ತಾವು ಅಲ್ಲಿದ್ದರೆ ತಮಗೆ ಎಲ್ಲಿ ವಿಪತ್ತು ಬರುವುದೊ ಎಂದು ಅಲ್ಲಿಂದ ಓಡಿದರು. ನರೇಂದ್ರ ಅವನ ಸ್ನೇಹಿತ ಇಬ್ಬರು ಮಾತ್ರ ಉಳಿದರು. ನರೇಂದ್ರನು ತನ್ನ ಪಂಚೆಯನ್ನೆ ಹರಿದು ಗಾಯವಾದ ಕಡೆ ಕಟ್ಟಿ ತಣ್ಣೀ ರನ್ನು ತಲೆಗೆ ತಟ್ಟಿದನು. ಕ್ರಮೇಣ ಅವನು ಎಚ್ಚೆತ್ತನು. ಹತ್ತಿರಿದ್ದ ಒಬ್ಬ ವೈದ್ಯನನ್ನು ಕರೆದು ಇವನಿಗೆ ಚಿಕಿತ್ಸೆಯನ್ನು ಮಾಡಿಸಿದನು. ಸ್ವಲ್ಪ ದಿನ ಅವನನ್ನು ಒಂದು ಖಾಲಿಯ ಮನೆಯಲ್ಲಿಟ್ಟು ನೋಡಿಕೊಂಡು ಗುಣ ವಾದ ಮೇಲೆ ಎಲ್ಲರಿಂದ ಚಂದಾ ಎತ್ತಿ ಒಂದು ಸಣ್ಣ ಹಣದ ಚೀಲ ವನ್ನು ಅವನಿಗೆ ಕೊಟ್ಟು ಕಳುಹಿಸಿದನು.

ನರೇಂದ್ರನ ತಂದೆ ಕಾರ್ಯನಿಮಿತ್ತ ರಾಯಪುರಕ್ಕೆ ಹೋಗಬೇಕಾಗಿ ಬಂತು. ಅಲ್ಲಿಯೆ ಎರಡು ವರುಷಗಳು ಇರಬೇಕಾಯಿತು. ಆಗ ಅಲ್ಲಿ ಶಾಲೆಯಿರಲಿಲ್ಲ. ಶಾಲೆಯನ್ನು ಆರಂಭಿಸಿ ತಂದೆಯೆ ಉಪಾಧ್ಯಾಯರ ಕೆಲಸವನ್ನು ಮಾಡಬೇಕಾಗಿ ಬಂದಿತು. ಅವರು ಹಲವು ಪುಸ್ತಕಗಳನ್ನು ಓದಿ ಹೇಳುತ್ತಿದ್ದರು. ಇವರ ಮನೆಗೆ ಹಲವು ಪ್ರಖ್ಯಾತ ವ್ಯಕ್ತಿಗಳು ಬಂದು ಹೋಗುತ್ತಿದ್ದರು. ಹಲವು ವೇಳೆ ನರೇಂದ್ರನೂ ತಂದೆಯೊಂದಿಗೆ ಇದ್ದು ಅವರ ಮಾತಿನಲ್ಲಿ ಭಾಗವಹಿಸುತ್ತಿದ್ದನು. ಒಂದು ಸಲ ತಂದೆ ಹೊರಗೆ ಹೋಗಿದ್ದಾಗ ಒಬ್ಬ ಪ್ರಖ್ಯಾತ ಬಂಗಾಳದ ಲೇಖಕನು ಬಂದನು. ಅವರೊಂದಿಗೆ ತಂದೆ ಬರುವ ತನಕ ನರೇಂದ್ರನಾಥನೆ ಮಾತ ನಾಡುತ್ತಿದ್ದನು. ತಂದೆ ಬಂದ ಮೇಲೆ ಆಗ ಲೇಖಕನು ಆಶ್ಚರ್ಯದಿಂದ "ಈ ಹುಡುಗ ಇಷ್ಟು ವಯಸ್ಸಿಗೆ ಎಷ್ಟೊಂದು ಓದಿರುವನು ! ಇವನೇನಾ ದರೂ ಸಾಹಿತ್ಯಕ್ಕೆ ಕೈಹಾಕಿದರೆ ಪ್ರಖ್ಯಾತ ಲೇಖಕನಾಗುವನು" ಎಂದನು.

ತಂದೆ ಧಾರಾಳಿ. ಸಂಪಾದನೆ ಮಾಡಿದಷ್ಟು ಖರ್ಚು ಮಾಡು ತ್ತಿದ್ದನು. ಒಂದು ದಿನ ನರೇಂದ್ರನು ತಂದೆಯನ್ನು "ನೀನು ನನಗೆ ಬಿಟ್ಟಿರುವುದೇನು" ಎಂದು ಕೇಳಿದನು. ತಂದೆಯು ಮಗನಿಗೆ, "ಹೋಗಿ

ಕನ್ನಡಿ ನೋಡಿಕೊ ಏನು ಬಿಟ್ಟಿರುವೆನು ಎಂದು ಗೊತ್ತಾಗುವುದು" ಎಂದನು. ಹಲವು ತಾಯಿತಂದೆಗಳು ಮಕ್ಕಳಿಗೆ ಬಿಡುವಂತೆ ಇವರು ಮಗನಿಗೆ ಬ್ಯಾಂಕಿನಲ್ಲಿ ದುಡ್ಡು ಬಿಡಲಿಲ್ಲ. ಸಾಹಸ, ಧೈರ್ಯ, ತನ್ನ ಸ್ವಂತ ಶಕ್ತಿಯ ಮೇಲೆ ನಿಂತುಕೊಳ್ಳುವುದು, ಇವೆ ವಿಶ್ವನಾಥದತ್ತನು ಮಗನಿಗೆ ಬಿಟ್ಟ ಪಿತ್ರಾರ್ಜಿತ ಆಸ್ತಿ. ಎಷ್ಟು ಜನ ತಂದೆತಾಯಿಯರು ಈ ಈ ಹೆಮ್ಮೆ ಪಡಬಲ್ಲರು!

ನರೇಂದ್ರನು ಎರಡು ವರುಷಗಳಾದ ಮೇಲೆ ಪುನಃ ಕಲ್ಕತ್ತೆಗೆ ಹಿಂತಿರುಗಿ ಬಂದನು. ಅದೇ ವರುಷ ಕಾಲೇಜನ್ನು ಸೇರಿ ಎಂಟ್ರೆನ್ಸ್ ಪರೀಕ್ಷೆಗೆ ಕುಳಿತು ಮೊದಲನೆಯ ದರ್ಜೆಯಲ್ಲಿ ಉತ್ತೀರ್ಣನಾದನು.

---

# ಗುರುದರ್ಶನ

ಪ್ರತಿಯೊಬ್ಬನ ಜೀವನದಲ್ಲಿಯೂ ಯೌವನ ಕಾಲವು ಅತಿ ಮುಖ್ಯ ವಾದುದು. ನಾವು ಮುಂದೆ ಏನು ಆಗಬೇಕೆಂಬುದನ್ನು ನಿರ್ಣಯಿಸುವ ಕಾಲ ಅದು. ಬಾಲ್ಯದಿಂದ ನಾವು ಸಂಗ್ರಹಿಸಿಟ್ಟ ನಂಬಿಕೆಗಳೂ ಉಗ್ರ ಪರೀಕ್ಷೆಗೆ ಗುರಿಯಾಗುವುವು. ನಮ್ಮ ಜೀವನಕ್ಕೆ ಒಂದು ದೊಡ್ಡ ಸಂಶ ಯದ ಬಿರುಗಾಳಿ ತಗಲುವುದು. ಯಾವ ಆದರ್ಶಗಳು ಇಂತಹ ಸಂಧಿ ಕಾಲದಲ್ಲಿ ನಿಲ್ಲಬಲ್ಲವೋ ಅವು ಮುಂದೆ ನಮ್ಮದಾಗುವುವು.

ನರೇಂದ್ರನು ಇಂತಹ ದೊಡ್ಡ ತುಮುಲದಲ್ಲಿ ಬಿದ್ದನು. ಕಾಲೇಜಿಗೆ ಸೇರಿದನು. ಪಾಶ್ಚಾತ್ಯರ ತತ್ತ್ವಶಾಸ್ತ್ರ, ವಿಜ್ಞಾನ ಶಾಸ್ತ್ರ ಮುಂತಾದುವು ಗಳನ್ನು ಓದಿದನು. ಪ್ರಪಂಚವೆಂದರೇನು, ಜೀವವೆಂದರೇನು, ದೇವ ರೆಂದರೇನು ಎಂದು ಯೋಚಿಸತೊಡಗಿದನು. ಕೇವಲ ಶಾಸ್ತ್ರಜ್ಞಾನದಿಂದ ಅವನಿಗೆ ತೃಪ್ತಿ ಸಿಕ್ಕಲಿಲ್ಲ. ಹಸಿದವನು ಪಾಕಶಾಸ್ತ್ರ ಓದಿದರೆ ಹೊಟ್ಟೆ ತುಂಬಬಲ್ಲದೆ? ಅಡಿಗೆ ಮಾಡಬೇಕು ಅಥವ ಮಾಡಿರುವವನ ಹತ್ತಿರ

ಹೋಗಿ ಬೇಡಬೇಕು. ದೇವರೆಂಬುವನು ಇರುವನೆ? ಇದ್ದರೆ ಅವನನ್ನು ನೋಡಲು ಸಾಧ್ಯವೆ? ಹಾಗೆ ಯಾರಾದರೂ ನೋಡಿರುವವರು ಇರುವರೆ? ಎಂದು ಪ್ರಶ್ನೆಗೆ ಆರಂಭಿಸಿದನು. ಮೊದಲು ಬ್ರಹ್ಮಸಮಾಜಕ್ಕೆ ಸೇರಿದನು. ಅಲ್ಲಿಯ ಪ್ರಾರ್ಥನಾರೀತಿ ಸಂಗೀತ ಇವುಗಳೆಲ್ಲವೂ ಮೊದಲು ಅವನಿಗೆ ಸ್ವಲ್ಪ ಶಾಂತಿಯನ್ನು ಕೊಟ್ಟಿತು. ಆದರೆ ಪೂರ್ಣ ತೃಪ್ತಿ ಸಿಕ್ಕಲಿಲ್ಲ. ಅಂದಿನ ಕಾಲದಲ್ಲಿ ಪ್ರಖ್ಯಾತರಾದವರನ್ನೆಲ್ಲ ಹೋಗಿ ದೇವರ ವಿಚಾರವಾಗಿ ಪ್ರಶ್ನೆ ಮಾಡಿದನು. ಯಾರಿಂದಲೂ ಸಮರ್ಪಕವಾದ ಉತ್ತರ ಸಿಕ್ಕಲಿಲ್ಲ. ಎಲ್ಲರೂ ಎರವಲಾಗಿ ತಂದ ಜ್ಞಾನವನ್ನೇ ಬಿಕರಿ ಮಾಡುತ್ತಿದ್ದರು. ಗೀತೆ ಹೀಗೆ ಹೇಳಿದೆ ಎನ್ನುವರು. ಉಪನಿಷತ್ತು ಹೀಗೆ ಹೇಳಿದೆ ಎನ್ನುವರು. ಹೆಚ್ಚು ಎಂದರೆ, ನಾವು ವಿಚಾರದಿಂದ ಸಮರ್ಥಿಸಬಲ್ಲೆವು ಎನ್ನುವರು. ಆದರೆ ವಿಚಾರ ಎರಡು ಕಡೆ ಅಲಗಿರುವ ಕತ್ತಿಯಂತೆ. ಬೇಕಾದರೆ ದೇವರನ್ನು ಸಮರ್ಥಿಸಬಹುದು, ಬೇಡವಾದರೆ ದೇವರು ಇಲ್ಲವೆಂದು ಸಾರಬಹುದು.

ಅಂದಿನ ಕಾಲದಲ್ಲಿ, ಗತಿಸಿದ ರವೀಂದ್ರನಾಥರ ತಂದೆ ಮಹರ್ಷಿ ದೇವೇಂದ್ರನಾಥರು ದೊಡ್ಡ ಸಾತ್ವಿಕ ವ್ಯಕ್ತಿಗಳೆಂದು ಹೆಸರಾಗಿದ್ದರು. ನರೇಂದ್ರನಾಥನು ಅವರ ಹತ್ತಿರ ಹೋಗಿ "ಮಹಾಶಯರೆ, ನೀವು ದೇವರನ್ನು ಕಂಡಿರುವಿರಾ?" ಎಂದು ಕೇಳಿದನು. ಅವರು ಈ ದಿಟ್ಟ ಪ್ರಶ್ನೆಯನ್ನು ಕೇಳಿದ ತರುಣನನ್ನು ನೋಡಿ, "ಮಗು ನನಗೆ ಸಿಕ್ಕಿಲ್ಲ. ನಿನಗೆ ಯೋಗಿಯ ಕಣ್ಣುಗಳಿವೆ. ಪ್ರಯತ್ನಿಸಿದರೆ ನಿನಗೆ ಸಿಕ್ಕಬಹುದು" ಎಂದರು. ಅಂತೂ ಎಲ್ಲಿಯೂ ಶಾಶ್ವತವಾದ ತೃಪ್ತಿ ಸಿಕ್ಕಲಿಲ್ಲ. ಹೀಗೆ ಅವರು ಅಲೆಯುತ್ತಿದ್ದಾಗ, "ದೇವರ ವಿಚಾರವಾಗಿ ತಿಳಿಯಬೇಕಾದರೆ ಅಲ್ಲಿ ಇಲ್ಲಿ ಹೋದರೆ ಪ್ರಯೋಜನವಿಲ್ಲ. ದಕ್ಷಿಣೇಶ್ವರದಲ್ಲಿ ಪರಮಹಂಸರೊಬ್ಬರು ಇದ್ದಾರೆ. ಅವರನ್ನು ಹೋಗಿ ನೋಡಿದರೆ ನಿನ್ನ ಮನಸ್ಸಿಗೆ ತೃಪ್ತಿಯಾಗಬಹುದು" ಎಂದು ಯಾರೋ ಹೇಳಿದರು. ಎಲ್ಲರನ್ನೂ ಪರೀಕ್ಷಿಸಿದ್ದಾಯಿತು. ಆ ಗೊಡ್ಡು ಬ್ರಾಹ್ಮಣ ಏನು ಹೇಳಿಯಾನು ಎಂಬ

ತಾತ್ಸಾರ. ಆದರೂ ಒಂದು ಸಲ ಪ್ರಯತ್ನಪಟ್ಟು ನೋಡೋಣ ಎಂದು ಅವನ ಸ್ನೇಹಿತನೊಂದಿಗೆ ಒಂದು ದಿನ ಹೋದನು.

ಶ್ರೀ ರಾಮಕೃಷ್ಣರು ನರೇಂದ್ರನನ್ನು ನೋಡಿದೊಡನೆಯೇ ಏನೋ ಬಹಳ ಕಾಲದಿಂದಲೂ ಪರಿಚಯವಿದ್ದಂತೆ ಕಂಡರು. ಅವನನ್ನು ಮಾತ್ರ ಒಳಗೆ ಕರೆದುಕೊಂಡು ಹೋಗಿ ಬಹಳ ಕಾತುರರಾಗಿ "ನೀನು ಏತಕ್ಕೆ ಇಷ್ಟು ತಡವಾಗಿ ಬಂದೆ. ಪ್ರಾಪಂಚಿಕರೊಂದಿಗೆ ಮಾತನಾಡಿ ನನಗೆ ಸಾಕಾಗಿದೆ. ನೀನು ಸಪ್ತಋಷಿಗಳಲ್ಲಿ ಒಬ್ಬನಾದ ನರನು. ಧರ್ಮವನ್ನು ಉದ್ಧರಿಸುವುದಕ್ಕೆ ಈಗ ಬಂದಿರುವೆ." ಎಂದು ಹೇಳಿ, ಅವರೇ ಮಿಠಾಯಿಯನ್ನು ತಿನ್ನಿಸಿದರು.

ನರೇಂದ್ರನಿಗೆ ಆಶ್ಚರ್ಯವಾಯಿತು, ನಾನು ವಿಶ್ವನಾಥದತ್ತನ ಮಗ ನರೇಂದ್ರ ; ಈ ಮನುಷ್ಯನು ಹುಚ್ಚನಾಗಿರಬೇಕು ಎಂದು ಯೋಚಿಸ ತೊಡಗಿದನು. ಎಲ್ಲರಿಗೂ ಹಾಕಿದ ಪ್ರಶ್ನೆಯನ್ನೇ ಶ್ರೀರಾಮಕೃಷ್ಣರಿಗೂ ಹಾಕಿದನು. "ಸ್ವಾಮಿ ಮಹಾಶಯರೆ ನೀವು ದೇವರನ್ನು ನೋಡಿರುವಿರಾ?" ಎಂದನು. ಶ್ರೀ ರಾಮಕೃಷ್ಣರು "ಹೌದು ನಾನು ಅವನನ್ನು ನೋಡುತ್ತೇನೆ, ನಾನು ನಿನ್ನನ್ನು ನೋಡುವುದಕ್ಕಿಂತ ಚೆನ್ನಾಗಿ ನೋಡುತ್ತಿದ್ದೇನೆ" ಎಂದರು. ನರೇಂದ್ರನು ಇದೇ ಮೊದಲನೆ ಸಾರಿ "ನಾನು ದೇವರನ್ನು ಕಂಡಿರುವೆನು" ಎಂಬುದನ್ನು ಕೇಳಿದ್ದು. ಪುನಃ ಶ್ರೀ ರಾಮಕೃಷ್ಣರು ಹೀಗೆ ಹೇಳತೊಡಗಿದರು. "ದೇವರನ್ನು ನೋಡಬಹುದು. ನಾನು ನಿನ್ನೊಂದಿಗೆ ಮಾತನಾಡುವಂತೆ ಅವನೊಂದಿಗೆ ಮಾತನಾಡಬಹುದು. ಆದರೆ ದೇವರಿಗಾಗಿ ಯಾರು ಕಾತರರಾಗಿರುವರು? ಹೆಂಡತಿ, ಮನೆ ಮಕ್ಕಳು ಇವರಿಗಾಗಿ ಕೊಡದಷ್ಟು ಕಣ್ಣೀರು ಸುರಿಸುವರು. ಆದರೆ ದೇವರಿಗಾಗಿ ಯಾರು ಹೀಗೆ ಮಾಡಬಲ್ಲರು?" ನರೇಂದ್ರನಿಗೆ ಇವರ ವಿಷಯದಲ್ಲಿ ಸ್ವಲ್ಪ ಅನುಮಾನವಾಯಿತು. ಹುಚ್ಚರು ಎಂದು ಅನ್ನಲಾಗುವುದಿಲ್ಲ. ಇವರಲ್ಲಿದ್ದ ಪ್ರೀತಿ, ತ್ಯಾಗ ಇವುಗಳು ಹುಚ್ಚರಲ್ಲಿ ಇರಲಾರವು. ಅಂತೂ ಮತ್ತೊಮ್ಮೆ ನೋಡೋಣ ಎಂದು ಮನೆಗೆ ಹಿಂತಿರುಗಿದನು.

ಸುಮಾರು ಎರಡು ತಿಂಗಳಾದ ಮೇಲೆ ಮತ್ತೊಂದು ದಿನ ಬಂದನು. ಶ್ರೀ ರಾಮಕೃಷ್ಣರು ಇವನ ಹತ್ತಿರ ಹೋಗಿ ಏನನ್ನೋ ಹೇಳುತ್ತ ತಲೆಯನ್ನು ಮುಟ್ಟಿದರು. ತಕ್ಷಣವೇ ನರೇಂದ್ರನಿಗೆ ಪ್ರಪಂಚ ಮಾಯವಾಯಿತು. ಇವನ ವ್ಯಕ್ತಿತ್ವ ಯಾವುದೋ ನಿರಾಕಾರವಾದ ಆನಂದದಲ್ಲಿ ಕರಗತೊಡಗಿತು. ನರೇಂದ್ರನು ಕಿರಚಿಕೊಳ್ಳಲು ಯತ್ನಿಸಿದನು. ಶ್ರೀ ರಾಮಕೃಷ್ಣರು ನಗುತ್ತ "ಸಾಕು ಇವತ್ತಿಗೆ ಇಷ್ಟು" ಎಂದರು. ಮನೆಗೆ ಬರುವಾಗ ನರೇಂದ್ರನು ಬ್ರಾಹ್ಮಣನಿಗೆ ಏನಾದರೂ ಮಾಯಮಂತ್ರ ಗೊತ್ತಿರಬಹುದೆ? ಆದರೆ ನಾನು ತುಂಬಾ ದೃಢವಾದ ಮನಸ್ಸಿನವನು. ನನ್ನ ಮೇಲೆ ಅವನು ಹೇಗೆ ಮಾಯಾಶಕ್ತಿಯನ್ನು ಪ್ರಯೋಗಿಸಬಲ್ಲ ಎಂದುಕೊಂಡನು.

ನರೇಂದ್ರನು ಕ್ರಮೇಣ ಶ್ರೀ ರಾಮಕೃಷ್ಣರ ತಪಸ್ಸಿನ ಆಕರ್ಷಣೆಗೆ ಸಿಕ್ಕಿದನು. ಅವರು ಹೇಳುವುದನ್ನೆಲ್ಲ ಪರೀಕ್ಷಿಸುವನು. ಯಾವುದನ್ನೂ ಒಂದೇಸಲ ಒಪ್ಪಿಕೊಳ್ಳುವುದಿಲ್ಲ. ಶ್ರೀ ರಾಮಕೃಷ್ಣರಿಗೆ ಇಂತಹ ತುಂಟ ಶಿಷ್ಯನನ್ನು ನೋಡಿದಾಗ ಕೋಪಕ್ಕಿಂತ ಪ್ರೀತಿ ಹೆಚ್ಚಾಯಿತು. ಶಿಷ್ಯನಲ್ಲಿ ಸ್ವಲ್ಪ ಸಾಮರ್ಥ್ಯವಿದೆ ಎಂದು ತಿಳಿದರು.

ಕಾಮಕಾಂಚನ ತ್ಯಾಗವೇ ಶ್ರೀ ರಾಮಕೃಷ್ಣರ ಉಪದೇಶದ ಪಲ್ಲವಿಯಾಗಿತ್ತು. ಇದನ್ನು ಪರೀಕ್ಷಿಸುವುದಕ್ಕಾಗಿ ಒಂದು ದಿನ ನರೇಂದ್ರನು ಶ್ರೀ ರಾಮಕೃಷ್ಣರು ಹೊರಗೆ ಹೋಗಿದ್ದಾಗ ಅವರ ಹಾಸಿಗೆಯ ಕೆಳಗೆ ಒಂದು ರೂಪಾಯಿಯನ್ನು ಅವಿತಿಟ್ಟನು. ಶ್ರೀ ರಾಮಕೃಷ್ಣರು ಒಳಗೆ ಬಂದು ಹಾಸಿಗೆಯ ಮೇಲೆ ಕುಳಿತೊಡನೆಯೆ ಅವರಿಗೆ ಒಂದು ಚೇಳು ಕುಟುಕಿದಂತೆ ಆಯಿತು. ಹಾಸಿಗೆಯನ್ನು ಕೊಡವಿ ನೋಡಿದಾಗ ಒಂದು ರೂಪಾಯಿ ಸಿಕ್ಕಿತು. ಇದು ನರೇಂದ್ರನಾಥನ ಚೇಷ್ಟೆ ಎಂದು ಅವರಿಗೆ ಗೊತ್ತಾಯಿತು. "ವರ್ತಕ ಹೇಗೆ ರೂಪಾಯಿಯನ್ನು ತೆಗೆದುಕೊಳ್ಳುವಾಗ ಶಬ್ದಮಾಡಿ ತೆಗೆದುಕೊಳ್ಳುವನೊ ಹಾಗೆಯೆ ನಾನು ಹೇಳುವುದನ್ನೆಲ್ಲ ಒರೆಗಲ್ಲಿಗೆ ತಿಕ್ಕಿ ನೋಡಿ ತೆಗೆದುಕೊ" ಎಂದರು.

ಶ್ರೀ ರಾಮಕೃಷ್ಣರ ನೇತೃತ್ವದಲ್ಲಿ ನರೇಂದ್ರನ ಆಧ್ಯಾತ್ಮಿಕಸಾಧನೆ ಮೊದಲಾಯಿತು. ಯಾವಾಗಲೂ ನಿರ್ವಿಕಲ್ಪ ಸಮಾಧಿಯಲ್ಲಿ ನಿರತರಾಗಿರಬೇಕೆಂಬುದು ಅವನ ಒಂದು ಅಭಿಲಾಷೆಯಾಗಿತ್ತು. ಇದನ್ನು ರಾಮಕೃಷ್ಣರು ಒಂದು ದಿನ ಕೇಳಿದರು. "ಎಂತಹ ಚಿಕ್ಕ ಮನಸ್ಸಿನವನು ನೀನು. ಅದನ್ನು ಮೀರಿದ ಒಂದು ಅವಸ್ಥೆ ಇದೆ. ಅದು ಜಗತ್ತಿನಲ್ಲಿರುವ ಜೀವ ಶಿವನೆಂದು ತಿಳಿದು ಕಣ್ಣು ಬಿಟ್ಟುಕೊಂಡು ಸೇವೆ ಮಾಡುವುದು. ನೀನು ನಿನ್ನ ಆತ್ಮೋದ್ಧಾರಕ್ಕೆ ಮಾತ್ರ ಹುಟ್ಟಿಲ್ಲ. ಎಲ್ಲರ ಉದ್ಧಾರಕ್ಕಾಗಿ ಬಂದಿರುವೆ" ಎಂದರು.

ನರೇಂದ್ರನಿಗೆ ಬಿ. ಎ. ಪಾಸಾಯಿತು. ಲಾ ಕಾಲೇಜಿಗೆ ಸೇರಿದನು. ತಂದೆ ನರೇಂದ್ರನನ್ನು ಮದುವೆ ಮಾಡಿಕೊ ಎಂದು ಒತ್ತಾಯ ಮಾಡುತ್ತಿದ್ದನು. ಅನೇಕ ಶ್ರೀಮಂತರ ಮನೆಯಿಂದ ಹಲವು ಹೆಣ್ಣುಗಳು ಬರುತ್ತಿದ್ದುವು. ಆದರೆ ನರೇಂದ್ರನಿಗೆ ಸಂಸಾರ ಪಂತದಲ್ಲಿ ಬೀಳುವುದಕ್ಕೆ ಇಚ್ಛೆಯಿರಲಿಲ್ಲ. ಅಂತೂ ಯಾವಯಾವುದೋ ವಿಘ್ನ ಒಂದು ಒಂದೂ ಸರಿಹೋಗಲಿಲ್ಲ. ಈ ಸಮಯಕ್ಕೆ ತಂದೆ ಕಾಲವಾದರು. ದರಿದ್ರಲಕ್ಷ್ಮಿ ಮನೆಗೆ ಕಾಲಿಟ್ಟಳು!

ತಂದೆ ಇರುವ ತನಕ ಚೆನ್ನಾಗಿ ಸಂಪಾದನೆ ಮಾಡುತ್ತಿದ್ದರು. ಅಷ್ಟೊ ಖರ್ಚು ಮಾಡುತ್ತಿದ್ದರು. ತಂದೆಯ ಸಾವಿನ ದುಃಖವನ್ನು ಮರೆಯುವುದಕ್ಕೆ ಮಾರ್ಗವಿಲ್ಲ. ಆಗಲೆ ನೌಕರಿ ಶಿಕಾರಿಗೆ ಮೊದಲು ಮಾಡಿದನು. ನೆಂಟರಿಷ್ಟರು ದೂರವಾದರು. ಜೊತೆಗೆ ಇದೇ ಸಮಯವೆಂದು ನರೇಂದ್ರನಿದ್ದ ಮನೆ ತಮಗೆ ಸೇರಬೇಕೆಂದು ಕೋರ್ಟಿನಲ್ಲಿ ದಾವಾ ಹಾಕಿದರು. ಎಷ್ಟು ಪ್ರಯತ್ನಪಟ್ಟರೂ ಕೆಲಸ ಸಿಕ್ಕಲಿಲ್ಲ. ಉಪವಾಸದಿಂದ ನರಳುವ ತನ್ನ ತಾಯಿ ಮತ್ತು ತಮ್ಮಂದಿರನ್ನು ನೋಡಲು ಕಷ್ಟವಾಯಿತು. ಒಬ್ಬ ಶ್ರೀಮಂತಳಾದ ಹೆಂಗಸು ನರೇಂದ್ರ ತನ್ನವನಾದರೆ ತಾನು ಅವನ ಬಡತನವನ್ನು ಕೊನೆಗಾಣಿಸುವೆನು ಎಂದಳು. ನರೇಂದ್ರನು ಇದನ್ನು ಧಿಕ್ಕರಿಸಿದನು. ಒಂದು ದಿನ ಬೇಸರವಾಗಿ ದಕ್ಷಿಣೇಶ್ವರಕ್ಕೆ ಬಂದನು. "ದಯಪಟ್ಟು ನಮ್ಮ ಮನೆಯವರು ಉಪವಾಸದಿಂದ ನರಳ

ವಂತೆ ಜಗನ್ಮಾತೆಯನ್ನು ಪ್ರಾರ್ಥಿಸಿ" ಎಂದು ಶ್ರೀ ರಾಮಕೃಷ್ಣರನ್ನು ಬೇಡಿದನು. ಶ್ರೀ ರಾಮಕೃಷ್ಣರು ಅದಕ್ಕೆ ಒಪ್ಪಲಿಲ್ಲ. "ನೀನೇ ಹೋಗಿ ಬೇಡು. ಆಕೆ ಇಚ್ಛಿಸಿದುದನ್ನು ಕೊಡುವಳು" ಎಂದರು. ಇವನು ಜಗನ್ಮಾತೆಯ ಮುಂದೆ ನಿಂತಾಗ ಅದು ಮರೆತುಹೋಯಿತು. ಜ್ಞಾನ ಭಕ್ತಿ ವೈರಾಗ್ಯವನ್ನು ಕೊಡೆಂದು ಪ್ರಾರ್ಥಿಸಿ ಹಿಂತಿರುಗಿದನು. ಎರಡನೆ ವೇಳೆಯೂ ಹಾಗೆಯೇ ಆಯಿತು. ಮೂರನೆ ಸಲ ಜ್ಞಾಪಿಸಿಕೊಂಡಾಗ ಪ್ರಾಪಂಚಿಕ ವಿಷಯಗಳನ್ನು ಬೇಡುವುದಕ್ಕೆ ನಾಚಿ ಪುನಃ ಜ್ಞಾನ ಭಕ್ತಿ ವೈರಾಗ್ಯಗಳನ್ನು ಕೊಡೆಂದು ಬೇಡಿ ಹಿಂತಿರುಗಿದನು. ಕೊನೆಗೆ ಶ್ರೀ ರಾಮಕೃಷ್ಣರು, "ಮಗು, ನೀನು ಪ್ರಾಪಂಚಿಕ ಸುಖವನ್ನು ಅನುಭವಿಸುವುದಕ್ಕೆ ಹುಟ್ಟಿಲ್ಲ. ನಿಮ್ಮ ಮನೆಯವರು ಹೇಗೊ ಮಾನ ಮುಚ್ಚಿಕೊಳ್ಳುವುದಕ್ಕೆ ಒಂದು ಚೂರು ಬಟ್ಟೆ, ಹಸಿವಿನಿಂದ ಪಾರಾಗುವುದಕ್ಕೆ ಆಹಾರ ಒದಗಿಸಿಕೊಳ್ಳುವರು" ಎಂದು ಹೇಳಿ ಕಳುಹಿಸಿದರು.

ಶ್ರೀ ರಾಮಕೃಷ್ಣರು ಮೆಲ್ಲಮೆಲ್ಲನೆ ನರೇಂದ್ರನಾಥನನ್ನು ತಾವು ಆಧ್ಯಾತ್ಮಿಕ ಜೀವನದಲ್ಲಿ ಯಾವ ಶಿಖರವನ್ನು ಮುಟ್ಟಿದರೊ ಅದೇ ಎತ್ತರಕ್ಕೆ ಕರೆದೊಯ್ದರು. ತಮ್ಮ ತಪಶ್ಶಕ್ತಿಯನ್ನೆಲ್ಲ ಅವನಿಗೆ ಧಾರೆ ಎರೆದರು. ಯಾವುದೋ ಒಂದು ಮಹಾಕಾರ್ಯವನ್ನು ಮಾಡಬೇಕಾಗಿದೆ ಎಂದು ನರೇಂದ್ರನನ್ನು ಎಚ್ಚರಿಸಿ ಇವರು ೧೮೮೬ ರಲ್ಲಿ ಸಮಾಧಿಸ್ಥರಾದರು.

---

# ಧರ್ಮ ಪ್ರಚಾರ

ಶ್ರೀರಾಮಕೃಷ್ಣರ ಕಾಲಾನಂತರ ನರೇಂದ್ರನಾಥ ಮತ್ತು ಇತರ ಶಿಷ್ಯರೆಲ್ಲ ಒಂದು ಕಡೆ ಸೇರಿದರು. ಅವರು ಸುಮಾರು ಇಪ್ಪತ್ತು ಜನರಿದ್ದರು. ಎಲ್ಲಾ ಯುವಕರು; ಸ್ಕೂಲು ಕಾಲೇಜುಗಳಲ್ಲಿ ಓದುತ್ತಿದ್ದರು. ಎಲ್ಲರೂ ಸಂಸಾರವನ್ನು ತ್ಯಜಿಸಿ ಸನ್ಯಾಸಿಗಳಾದರು. ನರೇಂದ್ರ ಸ್ವಾಮಿ ವಿವೇಕಾನಂದರಾದರು. ಕಠೋರ ಸಾಧನೆಯಲ್ಲಿ ಕೆಲವು ವರುಷ

ಕಳೆದರು, ಯಾವ ಅನುಭವವನ್ನು ಶ್ರೀ ರಾಮಕೃಷ್ಣರ ಕೃಪಾದೃಷ್ಟಿ ಯಿಂದ ಪಡೆದಿದ್ದರೋ ಅದನ್ನು ಸ್ವಪ್ರಯತ್ನದಿಂದ ತಮ್ಮದನ್ನಾಗಿ ಮಾಡಿಕೊಂಡರು. ಕೆಲವು ದಿನಗಳಾದ ಮೇಲೆ ತೀರ್ಥಯಾತ್ರೆ ಮಾಡ ಬೇಕೆಂಬ ಆಸೆಯಾಯಿತು. ಶಿಷ್ಯರು ಬೇರೆಬೇರೆ ಕಡೆಗೆ ಹೊರಟರು. ಸ್ವಾಮಿ ವಿವೇಕಾನಂದರಿಗೆ ಭರತಖಂಡದ ಜನರ ಮತ್ತು ಸ್ಥಳಗಳ ಪ್ರತ್ಯಕ್ಷ ಅನುಭವವನ್ನು ಪಡೆಯಬೇಕೆನ್ನಿಸಿತು. ಇವರು ಪರಿವ್ರಾಜಕರಾಗಿ ಹೊರಟರು. ಆಗಿನ್ನೂ ಜಗದ್ವಿಖ್ಯಾತರಾದ ಸ್ವಾಮಿ ವಿವೇಕಾನಂದ ರಾಗಿರಲಿಲ್ಲ. ಹಲವು ಸಂನ್ಯಾಸಿಗಳಲ್ಲಿ ಇವರೊಬ್ಬರಾಗಿದ್ದರು. ಆದರೂ ಇವರಲ್ಲಿದ್ದ ಪ್ರತಿಭೆ ಹಲವರಿಗೆ ಕಂಡಿತು. ಕೆಲವು ವೇಳೆ ರಾಜರ ಅತಿಥಿ ಗಳಾಗುತ್ತಿದ್ದರು. ಮತ್ತೆ ಕೆಲವು ವೇಳೆ ಬಡವನ ಜೋಪಡಿಯಲ್ಲಿ ವಾಸ ಮಾಡುತ್ತಿದ್ದರು. ಘನ ವಿದ್ವಾಂಸರೊಂದಿಗೆ ಕೆಲವು ವೇಳೆ ಬೆರೆ ಯುವರು, ಮತ್ತೆ ಕೆಲವು ವೇಳೆ ನಿರಕ್ಷರಕುಕ್ಷಿಗಳೊಂದಿಗೆ ಸಲಿಗೆ ಯಿಂದ ಇರುವರು. ಪ್ರೌಢ ಬ್ರಾಹ್ಮಣರೊಡನೆ ಕೆಲವುಕಾಲ, ಪತಿತ ನೆಂದು ತಿಳಿದ ಚಂಡಾಲನೊಡನೆ ಕೆಲವು ಕಾಲ ವಾಸಿಸುತ್ತಿದ್ದರು. ಕೆಲವು ವೇಳೆ ಮೃಷ್ಟಾನ್ನ, ರಾಜರುಗಳಿಂದ ಪಾದಪೂಜೆ. ಕೆಲವು ವೇಳೆ ತಿರಸ್ಕಾರ, ಅವಮಾನ, ಉಪವಾಸ. ಅಂತೂ ಭರತಖಂಡದಲ್ಲಿ ರಾಜನ ಅರಮನೆ ಯಿಂದ ಬಡವನ ಗುಡಿಸಿಲಿನವರೆಗೆ, ಪಂಡಿತರಿಂದ ಪಾಮರನವರೆಗೆ ಪ್ರತ್ಯಕ್ಷ ಅನುಭವವನ್ನು ಸಂಪಾದಿಸಿದರು. ಹಿಂದೆ ಧರ್ಮಕ್ಕೆ, ದಾನಕ್ಕೆ, ತಪಸ್ಸಿಗೆ ತವರೂರಾದ ಭರತಖಂಡ ಇಂದು ಭಿಕಾರಿಗಳ, ಅಜ್ಞಾನಿಗಳ ಕೊಂಪೆ ಯಾಗಿರುವುದನ್ನು ನೋಡಿ ಅವರ ಹೃದಯ ಕರಗಿತು. ಹೇಗಾದರೂ ಮಾಡಿ ಭರತಖಂಡವನ್ನು ಪುನಃ ಮೇಲೆತ್ತಬೇಕೆಂಬ ಆಸೆಯೊಂದು ಅವರ ಮನಸ್ಸಿನಲ್ಲಿ ವ್ಯಾಪಿಸಿತು.

ಮೊದಲು ಗಯೆಗೆ ಹೋದರು. ಅಲ್ಲಿಂದ ಕಾಶೀ ವಿಶ್ವನಾಥನ ದರ್ಶನ. ಅಲ್ಲೇ ಹಲವು ದಿನಗಳು ಇದ್ದರು. ಒಂದು ದಿನ ಇವರು ದಾರಿಯಲ್ಲಿ ಬರುತ್ತಿದ್ದಾಗ ಒಂದು ಕಪಿಸೇನೆ ಅಟ್ಟಿಕೊಂಡು ಬಂದಿತು. ಇವರು ಓಡಿಹೋಗುತ್ತಿದ್ದರು. ಹತ್ತಿರಿದ್ದ ಒಬ್ಬನು ಕಪಿಗಳನ್ನು ಎದುರಿಸಿ;

ಅಂಜಬೇಡಿ ಎಂದನು. ಇವರು ತಕ್ಷಣವೆ ಹಿಂತಿರುಗಿ ದುರುಗುಟ್ಟಿ ನೋಡಿದೊಡನೆಯೆ ಕಪಿಸೇನೆ ಪಲಾಯನವಾಯಿತು. ಅವರು ನಂತರ ಇದನ್ನೆ ತಮ್ಮ ಉಪನ್ಯಾಸದಲ್ಲಿ ಹೀಗೆ ಹೇಳುತ್ತಿದ್ದರು:—ಕಷ್ಟವನ್ನು, ಮೂರ್ಖರನ್ನು, ಸಾವನ್ನು, ಸೋಲನ್ನು ಎದುರಿಸಬೇಕು. ಆಗ ಮಾತ್ರ ಅವುಗಳು ಓಡಿಹೋಗುವುವು.

ಅನಂತರ ಆಗ್ರಾಕ್ಕೆ ಬಂದರು. ಷಾಜಹಾನನ ಪ್ರೇಮದ ಕಾಣಿಕೆ ತಾಜಮಹಲ್. ಇದನ್ನು ನೋಡುತ್ತ "ಇದರ ಪ್ರತಿಯೊಂದು ಚದುರ ಅಂಗುಲವನ್ನು ನೋಡಬೇಕಾದರೆ ಹಲವು ದಿನಗಳು ಹಿಡಿಯುತ್ತವೆ" ಎಂದರು. ಇವರು ಒಣಯತಿಗಳಲ್ಲ. ಸೌಂದರ್ಯವನ್ನು ಕಂಡರೆ ಅದರಲ್ಲೂ ತನ್ಮಯರಾಗಬಲ್ಲವರಾಗಿದ್ದರು. ಬೃಂದಾವನಕ್ಕೆ ಹೊರಟರು. ಅಲ್ಲಿರುವ ಗೋವರ್ಧನಗಿರಿಯನ್ನು ಪ್ರದಕ್ಷಿಣೆ ಮಾಡುತ್ತಿದ್ದಾಗ ಕೆಲವು ಕಾಲ ತಾನಾಗಿ ಯಾರಾದರೂ ಕೊಟ್ಟಲ್ಲದೆ ತಾವು ಏನನ್ನೂ ಕೇಳುವು ದಿಲ್ಲವೆಂದು ಸಂಕಲ್ಪ ಮಾಡಿಕೊಂಡರು. ಮೊದಲನೆಯ ದಿನ ನಡೆದು ಸಾಕಾಗಿತ್ತು. ಜೊತೆಗೆ ಮಳೆ ಜೋರಿ ಬಂದಿತ್ತು. ತುಂಬಾ ಹಸಿವು. ದೇವರನ್ನು ಧ್ಯಾನಿಸುತ್ತ ನಡೆದುಕೊಂಡು ಹೋಗುತ್ತಿದ್ದರು. ಹಿಂದಿನಿಂದ ಯಾರೋ ಬಂದು, ಕೂಗಿನಾಡಿ ಒಂದು ಆಹಾರವನ್ನು ತಂದರು! ಸ್ವಾಮೀಜಿಯವರಿಗೆ ಆಶ್ಚರ್ಯವಾಯಿತು. ಇದು ಭಗವಂತನ ಲೀಲೆ ಶ್ರೀ ಕೃಷ್ಣ ತನ್ನ ಭಕ್ತರನ್ನು ಕೈಬಿಟ್ಟಿಲ್ಲವೆಂದು ಆಹಾರವನ್ನು ಸ್ವೀಕರಿಸಿದರು. ಪುನಃ ಗಲಲಲ ರಲ್ಲೆ ಕಲ್ಕತ್ತೆಗೆ ಬಂದರು.

ಕೆಲವು ತಿಂಗಳು ಇದ್ದಮೇಲೆ ಭರತಖಂಡವನ್ನೆಲ್ಲ ನೋಡಬೇಕೆಂದು ಬಯಸಿ ಶ್ರೀರಾಮಕೃಷ್ಣರ ಧರ್ಮಪತ್ನಿ ಶ್ರೀ ಶಾರದಾದೇವಿಯವರ ಆಶೀರ್ವಾದವನ್ನು ಪಡೆದು ತನ್ನ ಗುರುಭಾಯಿಗಳಿಗೂ ಕೂಡ ಎಲ್ಲಿ ಹೋಗುತ್ತೇನೆ ಎಂಬುದನ್ನು ಹೇಳದೆ ವಿಶಾಲವಾದ ಭರತಖಂಡದಲ್ಲಿ ಮುಳುಗಿದರು. ಅನಂತರ ಇವರ ಸುದ್ದಿ ಕಲ್ಕತ್ತೆಯ ಶಿಷ್ಯರಿಗೆ ಗೊತ್ತಾದುದು ಅಮೇರಿಕಾದಲ್ಲಿ ಪ್ರಖ್ಯಾತಿಯನ್ನು ಗಳಿಸಿದ ಮೇಲೆ.

ಆಳ್ವಾರದಲ್ಲಿ ಮಹಾರಾಜ ಮಂಗಳಸಿಂಗರನ್ನು ನೋಡಿದರು.

ಆತನಿಗೆ ವಿಗ್ರಹಾರಾಧನೆ ಮುಂತಾದುವಲ್ಲಿ ನಂಬಿಕೆ ಇರಲಿಲ್ಲ. ಸ್ವಲ್ಪ ಕಟುವಾಗಿ ಅದನ್ನು ಸ್ವಾಮಿಜಿಯವರಿಗೆ ಹೇಳಿದರು. ಸ್ವಾಮಿಜಿಯವರು, ಹತ್ತಿರ ಇದ್ದ ಮಂಗಳ ಸಿಂಗರ ತಂದೆಯ ಭಾವಚಿತ್ರವನ್ನು ತೆಗೆದು ಅಧಿಕಾರಿಯೊಬ್ಬನನ್ನು ಕರೆದು ಅದರ ಮೇಲೆ ಉಗುಳುವಂತೆ ಹೇಳಿದರು. ಇದೇನು ಸಂನ್ಯಾಸಿ ಹೀಗೆ ಹೇಳುತ್ತಾನಲ್ಲ ಎಂದು ಅಧಿಕಾರಿಗೆ ಆಶ್ಚರ್ಯವಾಯಿತು. ಆತನು ಸುಮ್ಮನೆ ಇದ್ದನು. ಸ್ವಾಮಿಜಿಯವರು ಅದನ್ನು ನೋಡಿ ಮಂಗಳಸಿಂಗರಿಗೆ ಹೀಗೆಂದರು; "ಭಾವಚಿತ್ರದಲ್ಲಿ, ನಿಮ್ಮ ತಂದೆಗೆ ಸೇರಿದ ಯಾವುದೂ ಇಲ್ಲ, ಆದರೂ ಈತನು ನಾಚುತ್ತಾನೆ. ಏಕೆಂದರೆ ಅದು ನಿಮ್ಮ ತಂದೆಯ ಜ್ಞಾಪಕವನ್ನು ತರುವುದು. ಹಾಗೆ, ವಿಗ್ರಹವೇ ದೇವರಲ್ಲ. ಆದರೆ ದೇವರ ನೆನಪನ್ನು ತರುವುದು. ವಿಗ್ರಹದ ಮೂಲಕವಾಗಿ ದೇವರನ್ನು ಆರಾಧಿಸುತ್ತೇವೆಯೆ ಹೊರತು, ಎಲೆ ಕಲ್ಲೆ! ಎಲೆ ಮಣ್ಣೆ! ನನಗೆ ವರವನ್ನು ಕೊಡು ಎಂದು ಬೇಡುವುದಿಲ್ಲ." ಹಲವು ಊರುಗಳನ್ನು ನೋಡಿಕೊಂಡು ಖೇತ್ರಿಗೆ ಬಂದರು. ಅಲ್ಲಿಯ ರಾಜರು ಇವರನ್ನು ಸನ್ಮಾನಿಸಿದರು. ಆಸ್ಥಾನಕ್ಕೆ ಸೇರಿದ ಗಾಯಕಿಯೊಬ್ಬಳು ಹಾಡಿದ ಭಕ್ತಿರಸವಾದ ಕೀರ್ತನೆಯನ್ನು ಕೇಳಿ ಎಂತಹ ಹೀನವೃತ್ತಿಯನ್ನು ಅವಲಂಬಿಸಿರಲಿ ಅವರಲ್ಲಿಯೂ ಕೆಲವುವೇಳೆ ಉತ್ತಮರೂ ಇರಬಲ್ಲರೆಂದು ಗೊತ್ತಾಯಿತು.

ಒಂದುಸಲ ಭಕ್ತರು ಯಾರೊ ಎರಡನೆ ತರಗತಿಯ ಟಿಕೀಟನ್ನು ತೆಗೆದುಕೊಟ್ಟು ರೈಲಿನಲ್ಲಿ ಇವರನ್ನು ಕಳುಹಿಸಿದ್ದರು. ಆಗ ತಾವಾಗಿ ಯಾರನ್ನೂ ಏನೂ ಕೇಳುವುದಿಲ್ಲವೆಂದು ವ್ರತವನ್ನು ಕೈಕೊಂಡಿದ್ದರು. ಅದೇ ಗಾಡಿಯಲ್ಲಿ ಒಬ್ಬ ಮಾರ್ವಾಡಿಯವನು ಪ್ರಯಾಣ ಮಾಡುತ್ತಿದ್ದನು. ಹೊರಗೆ ಬಿಸಲಿನ ಝಳ. ಇವನು ಒಳಗೆ ತಂಪಾದ ಪಾನಕ ಮಾಡಿ ಕುಡಿಯುತ್ತಿದ್ದನು. ಜೊತೆಗೆ ರುಚಿರುಚಿಯಾದ ತಿಂಡಿಯನ್ನು ತಿನ್ನುತ್ತಿದ್ದನು. ಸ್ವಾಮಿಜಿಯವರ ಸಪ್ಪೆ ಮುಖವನ್ನು ನೋಡಿ "ನೀನು ಏತಕ್ಕೆ ಕಷ್ಟಪಟ್ಟು ಸಂಪಾದನೆ ಮಾಡಿ ನನ್ನಂತೆ ಸುಖವಾಗಿರಬಾರದು." ಎಂದು ಹಾಸ್ಯ ಮಾಡಿದನು. ಇಬ್ಬರೂ ಒಂದು ಸ್ಟೇಷನ್ನಿನಲ್ಲಿ ಇಳಿದರು.

ಸ್ವಾಮಿ ವಿವೇಕಾನಂದರು ಎರಡು ದಿನದಿಂದಲೂ ಊಟ ಮಾಡಿರಲಿಲ್ಲ.
ಸ್ಟೇಷನಿನಲ್ಲಿ ಯಾರೋ ಮಿಠಾಯಿ ಮಾರುವವನು ಒಂದು ತಟ್ಟೆಯಲ್ಲಿ
ಹಲವು ಬಗೆಯ ತಿಂಡಿ ಪದಾರ್ಥಗಳನ್ನೂ ನೀರನ್ನೂ ಇಟ್ಟು ಕುಳಿತು
ಕೊಳ್ಳುವುದಕ್ಕೆ ಒಂದು ಸಣ್ಣ ಕುರ್ಚಿಯನ್ನು ಇವರಿಗೆ ತಂದನು!
ಸ್ವಾಮಿಜಿಯವರಿಗೆ ಆಶ್ಚರ್ಯವಾಯಿತು. ಮತ್ತೆ ಯಾರಿಗೋ ಇವನು
ತಂದಿರಬಹುದೆಂದು ಮೊದಲು ಅದನ್ನು ಸ್ವೀಕರಿಸಲಿಲ್ಲ. ಮಿಠಾಯಿ
ಯವನು "ತಾನು ಮಧ್ಯಾಹ್ನ ನಿದ್ದೆ ಮಾಡುತ್ತಿದ್ದಾಗ ರಾಮನು ಕನಸಿ
ನಲ್ಲಿ ಬಂದು 'ನನ್ನ ಭಕ್ತನೊಬ್ಬನು ಉಪವಾಸವಿದ್ದಾನೆ. ನೀನು ಬೇಗ
ಅವನಿಗೆ ಆಹಾರವನ್ನು ತೆಗೆದುಕೊಂಡು ಹೋಗು ಎಂದು ಹೇಳಿದನು."
ಇದನ್ನು ಕೇಳಿ ಸ್ವಾಮಿಜಿಯವರ ಕಣ್ಣಿನಲ್ಲಿ ನೀರು ಬಂದಿತು. ದೇವರ
ದಯೆ ಎಷ್ಟು ಅಪಾರವಾದುದೆಂದು ಎಣಿಸಿದರು. ಯಾವನು ದೇವರನ್ನೇ
ಸಂಪೂರ್ಣವಾಗಿ ನೆಚ್ಚುತ್ತಾನೆಯೋ ಅವನ ಯೋಗಕ್ಷೇಮವನ್ನೆಲ್ಲ ನಾನು
ನೋಡಿಕೊಳ್ಳುತ್ತೇನೆಂದು ಶ್ರೀಕೃಷ್ಣನು ಹೇಳಿರುವನು. ಇದು ಅಕ್ಷರಶಃ
ಸತ್ಯವೆಂದು ಅವರಿಗೆ ತೋರಿತು.

ಮತ್ತೊಂದು ಸಲ ಪ್ರಯಾಣ ಮಾಡುತ್ತಿದ್ದಾಗ ಅದೇ ಗಾಡಿ
ಯಲ್ಲಿ ಇಬ್ಬರು ಇಂಗ್ಲೀಷಿನವರು ಇದ್ದರು. ಇವರು ಸ್ವಾಮಿಜಿಯವ
ರನ್ನು ಸಾಧಾರಣ ಭಿಕ್ಷುಕನೆಂದು ತಿಳಿದು ಇಂಗ್ಲೀಷಿನಲ್ಲಿ ತಮ್ಮೊಳಗೆ
ಇವರನ್ನು ಹಾಸ್ಯ ಮಾಡುತ್ತಿದ್ದರು. ಸ್ವಾಮಿಜೀಯವರು ಸುಮ್ಮನೆ
ಕುಳಿತಿದ್ದರು. ಮುಂದಿನ ಸ್ಟೇಷನ್ ಬಂದಾಗ ಇಂಗ್ಲೀಷಿನಲ್ಲಿ ಸ್ವಲ್ಪ
ನೀರು ಕೊಡಿ ಎಂದರು. ಇದನ್ನು ಕೇಳಿ ಇಂಗ್ಲೀಷಿನವರು ಈ ಭಿಕ್ಷುಕ
ನಿಗೆ ಇಂಗ್ಲೀಷ್ ಬೇರೆ ಗೊತ್ತಿದೆ ಎಂದುಕೊಂಡರು. "ನೀನು ಏತಕ್ಕೆ
ಸುಮ್ಮನೆ ಇದ್ದೆ? ನಾವು ನಿನ್ನ ವಿಚಾರವಾಗಿ ಮಾತನಾಡುತ್ತಿದ್ದಾಗ"
ಎಂದರು. ಸ್ವಾಮಿಜಿಯವರು "ನಿಮ್ಮಂತ ಮೂರ್ಖರನ್ನು ನೋಡು
ವುದು ಇದೇ ಮೊದಲಲ್ಲ" ಎಂದರು

ಸ್ವಾಮಿಜೀಯವರು ಮೈಸೂರಿಗೂ ಬಂದಿದ್ದರು. ಆಗ ಈಗಿನ
ಮಹಾರಾಜರ ತಾತಂದಿರು ಆಳುತ್ತಿದ್ದರು. ಕೆಲವು ದಿನಗಳು ಅವರ

ಅತಿಥಿಗಳಾಗಿದ್ದರು. ಆಗ ಶೇಷಾದ್ರಿ ಅಯ್ಯರ್ ಅವರು ದಿವಾನರು. ಅವರೇ ಮೊದಲು ಸ್ವಾಮಿಜಿಯವರನ್ನು ಮಹಾರಾಜರಿಗೆ ಪರಿಚಯ ಮಾಡಿ ಕೊಟ್ಟರು. ಒಂದು ದಿನ ತಮ್ಮ ಪರಿವಾರದೊಂದಿಗೆ ಇರುವಾಗ ಮಹಾರಾಜರು "ಏನು ಸ್ವಾಮೀಜಿ ನಮ್ಮ ಪರಿವಾರದವರು ಹೇಗೆ?" ಎಂದು ಕೇಳಿದರು. ಸ್ವಾಮೀಜಿಯವರು "ನಿಮ್ಮದು ಒಳ್ಳೆಯ ಮನಸ್ಸು. ಆದರೆ ನೀವು ಪರಿವಾರದವರಿಂದ ಸುತ್ತಲ್ಪಟ್ಟಿರುವಿರಿ. ಪರಿವಾರ ಎಲ್ಲಿ ಹೋದರೂ ಪರಿವಾರವೆ" ಎಂದರು. "ಇಲ್ಲ ಸ್ವಾಮೀಜಿ ನನ್ನ ದಿವಾನರಾದರೂ ಬುದ್ಧಿವಂತರು ಮತ್ತು ನಂಬಿಕಸ್ಥರು" ಎಂದರು ಮಹಾರಾಜರು. ಸ್ವಾಮೀಜಿಯವರು "ದಿವಾನರು ಮಹಾರಾಜರಿಂದ ದುಡ್ಡನ್ನು ಕಸಿದು ಇಂಗ್ಲೀಷ್ ಕಾರ್ಯದರ್ಶಿಗೆ ಕೊಡುವರು" ಎಂದರು. ಮಹಾರಾಜರು ಅವರನ್ನು ಬೇರೆ ಕಡೆ ಕರೆದು "ನೀವು ಹೀಗೆಲ್ಲ ಹೇಳಿದರೆ ನಿಮ್ಮ ಪ್ರಾಣಕ್ಕೆ ಅಪಾಯ ಬರಬಹುದು" ಎಂದರು. ಸ್ವಾಮೀಜಿಯವರು "ಏನು! ನಿಜವಾದ ಸಂನ್ಯಾಸಿ ಪ್ರಾಣಕ್ಕೆ ಅಂಜಿ ಅಸತ್ಯವನ್ನು ಹೇಳುವನೆ" ಎಂದರು. ಸ್ವಾಮೀಜಿಯವರು ಮೈಸೂರನ್ನು ಬಿಟ್ಟು ಹೋಗುವುದಕ್ಕೆ ಮುಂಚೆ ತಮ್ಮ ಒಂದು ಸಂದೇಶವನ್ನು ಆಗಿನ ಕಾಲದ ಫೋನೋಗ್ರಾಫಿನ ರಿಕಾರ್ಡಿನಲ್ಲಿ ಬಿಟ್ಟುಹೋದರು.

ಹಲವು ಸ್ಥಳಗಳನ್ನು ನೋಡಿಕೊಂಡು ಸ್ವಾಮೀಜಿಯವರು ಮದರಾಸಿಗೆ ಬಂದರು. ಇಷ್ಟು ಹೊತ್ತಿಗೆ ಅಮೆರಿಕಾ ದೇಶದಲ್ಲಿ ಎಲ್ಲಾ ಧರ್ಮಗಳ ಸಮ್ಮೇಳನ ಒಂದನ್ನು ನಡೆಸುವರು ಎಂಬ ಸುದ್ದಿ ಹಬ್ಬಿತು. ಹಲವು ಭಕ್ತರು ಸ್ವಾಮೀಜಿಯವರನ್ನು ಅಮೇರಿಕಾ ದೇಶಕ್ಕೆ ಹೋಗಿ ಹಿಂದೂ ಧರ್ಮದ ವಿಷಯವಾಗಿ ಮಾತನಾಡಿ ಎಂದರು. ಇವರು ಒಪ್ಪಿಕೊಂಡರು. ಇಷ್ಟು ಹೊತ್ತಿಗೆ ಖೇತ್ರಿ ಮಹಾರಾಜರಿಗೆ ಒಂದು ಗಂಡು ಮಗುವಾಗಿತ್ತು. ಇವರು ಸ್ವಾಮೀಜಿಯವರನ್ನು ಬರಮಾಡಿಕೊಂಡು ಸನ್ಮಾನಿಸಿ ಅಮೇರಿಕಾ ದೇಶಕ್ಕೆ ಹಡಗಿನಲ್ಲಿ ಕೂಡಿಸಿ ಕಳುಹಿಸಿದರು.

ಸ್ವಾಮಿಜಿಯವರು ಬೊಂಬಾಯಿಯಲ್ಲಿ ಹಡಗನ್ನು ಹತ್ತಿದರು. ಸಿಲೋನ್, ಸಿಂಗಪುರ, ಜಪಾನ್ ಇವುಗಳ ಮೂಲಕವಾಗಿ ಹಡಗು ಅಮೇರಿಕಾ ದೇಶವನ್ನು ಮುಟ್ಟಿತು. ಅಲ್ಲಿಂದ ಚಿಕಾಗೊ ನಗರಕ್ಕೆ ಬಂದರು. ಸಮ್ಮೇಳನ ನಡೆಯುವುದು ಸೆಪ್ಟಂಬರ್ ತಿಂಗಳಲ್ಲಿ ಎಂದು ತಿಳಿದರು. ಆಗ ಇನ್ನೂ ಜುಲೈ. ಪ್ರತಿದಿನವೂ ನೀರಿನಂತೆ ಹಣ ವ್ಯಯವಾಗುತ್ತಿತ್ತು. ತಂದ ದುಡ್ಡೆಲ್ಲ ಕರಗುತ್ತ ಬಂದಿತು. ಅದೂ ಅಲ್ಲದೆ ಸಮ್ಮೇಳನದಲ್ಲಿ ಮಾತನಾಡಬೇಕಾದರೆ ತಿಳಿಸುವ ಕಾಲವು ಆಗಲೆ ಮೀರಿದೆ ಎಂದು ತಿಳಿದರು. ಮಾತನಾಡುವವರು ಯಾವುದಾದರೂ ಸಂಘದ ಪರವಾಗಿ ಬಂದಿರಬೇಕಾಗಿತ್ತು. ಈ ಯಾವ ಸೌಲಭ್ಯವೂ ಅವರಿಗೆ ಇರಲಿಲ್ಲ. ದೇವರಮೇಲೆ ಭಾರ ಹಾಕಿದರು. ಚಿಕಾಗೊ ನಗರದಲ್ಲಿರುವುದಕ್ಕಿಂತ ಬಾಸ್ಟನ್ನಿನಲ್ಲಿದ್ದರೆ ಖರ್ಚು ಕಡಿಮೆ ಎಂದು ತಿಳಿದು ಅಲ್ಲಿಗೆ ಹೊರಟರು.

ರೈಲಿನಲ್ಲಿ ಅಮೇರಿಕಾ ದೇಶದ ಒಬ್ಬ ಮಹಿಳೆಯ ಪರಿಚಯವಾಯಿತು. ಆಕೆ ಸ್ವಾಮಿಜಿಯುವರನ್ನು ತಮ್ಮ ಮನೆಯಲ್ಲಿ ಇರಬಹುದೆಂದು ಕೇಳಿಕೊಂಡಳು. ಸ್ವಾಮಿಜಿಯವರು ಒಪ್ಪಿಕೊಂಡರು. ಇದರಿಂದ ದಿವಸಕ್ಕೆ ಎರಡು ಪೌಂಡು ಉಳಿತಾಯವಾಗುತ್ತಿತ್ತು. ಆಕೆ ಹಲವರನ್ನು ಕರೆದು ಮನೆಯಲ್ಲಿರುವ ಇಂಡಿಯಾದೇಶದ ಮನುಷ್ಯನನ್ನು ತೋರುತ್ತಿದ್ದಳು. ಆಗ ಇವರಿಗೆ ಹಾರವರ್ಡ್ ವಿಶ್ವವಿದ್ಯಾನಿಲಯದ ಪ್ರೊಫೆಸರ್ ರೈಟರ ಪರಿಚಯವಾಯಿತು. ಅವರು ಇವರನ್ನು ವಿಶ್ವಧರ್ಮ ಸಮ್ಮೇಳನದಲ್ಲಿ ಮಾತನಾಡುವಂತೆ ಕೇಳಿದರು. ಸ್ವಾಮಿ ವಿವೇಕಾನಂದರು ತಮ್ಮನ್ನು ಪರಿಚಯ ಮಾಡಿಕೊಡುವ ಯಾವ ಪತ್ರವೂ ತಮ್ಮಲ್ಲಿ ಇಲ್ಲವೆಂದರು. ರೈಟರು ತಾವೆ ಒಂದು ಪತ್ರವನ್ನು ಬರೆದು ಇವರಿಗೆ ಟಿಕೀಟನ್ನು ತೆಗೆದು ಚಿಕಾಗೋ ನಗರಕ್ಕೆ ಕಳುಹಿಸಿದರು.

ಆದರೆ ನಗರದಲ್ಲಿ ಎಲ್ಲಿ ಇಳಿಯಬೇಕೆಂಬುದನ್ನು ಮರೆತುಬಿಟ್ಟರು. ಚಿಕಾಗೊ ನಗರದ ಯಾವುದೋ ಒಂದು ಸಣ್ಣ ಸ್ಟೇಷನ್ನಿನಲ್ಲಿ ಇಳಿದರು. ಅಲ್ಲಿ ಹೊರಗೆ ಹೋಗಿ ಜನರನ್ನು ವಿಶ್ವಧರ್ಮ ಸಮ್ಮೇಳನ ನಡೆಯುವ ಜಾಗವನ್ನು ತೋರಿಸಿ ಎಂದು ಕೇಳಿದರು. ಆದರೆ ಅಲ್ಲಿದ್ದ ಜನರೆಲ್ಲ

ಮೂರು ವರುಷ ಅಮೇರಿಕಾ ದೇಶದಲ್ಲಿ ದುಡಿದು ೧೮೯೭ ರಲ್ಲಿ ಇಂಡಿಯಾ ದೇಶಕ್ಕೆ ಹಿಂತಿರುಗಿದರು. ಮೊದಲು ಕಾಲಿಟ್ಟುದು ಕೊಲಂಬೊ ನಗರದಲ್ಲಿ. ಕೊಲೊಂಬೊದಿಂದ ಕಲ್ಕತ್ತೆಯವರೆಗೆ ಜನರು ತೋರಿಸಿದ ಆದರ ಗೌರವಗಳು ದಂಡಯಾತ್ರೆಯನ್ನು ಪೂರೈಸಿಕೊಂಡು ಬಂದ ಯಾವ ಚಕ್ರವರ್ತಿಗೂ ಹಿಂದೆ ತೋರಿಸಿರಲಿಲ್ಲ. ರಾಜರುಗಳು, ಶ್ರೀಮಂತರು, ದೀನರು, ದರಿದ್ರರು, ಜನರು ಕುಳಿತ ಗಾಡಿಯನ್ನು ಎಳೆದರು. ಇವರ ಪಾದಪೂಜೆ ಮಾಡಿದರು. ಆರತಿ ಎತ್ತಿದರು, ಹಾಡಿದರು. ಆದರೂ ಇವರು ಹಿಂದಿನ ಸಿಗರ್ರಿ ಸ್ವಾಮಿ ವಿವೇಕಾನಂದರೇ. ಕೀರ್ತಿ, ಗೌರವಗಳನ್ನೆಲ್ಲ ಶ್ರೀ ರಾಮಕೃಷ್ಣರ ಪರವಾಗಿ ಸ್ವೀಕರಿಸಿ ಎಲ್ಲವನ್ನು ಅವರ ಪಾದತಳಕ್ಕೆ ಸಮರ್ಪಿಸಿ ಧನ್ಯರಾಗುತ್ತಿದ್ದರು. ಕೀರ್ತಿಯನ್ನು ಗಳಿಸುವುದು ಸುಲಭ. ಅದನ್ನು ಜೀರ್ಣಿಸಿಕೊಳ್ಳುವುದು ಬಹಳ ಕಷ್ಟ. ನನಗೆ ಬಂದ ಕೀರ್ತಿ ಗೌರವಗಳಲ್ಲಿ ನೂರನೆ ಒಂದು ಪಾಲು ಸಾಧಾರಣ ಮನುಷ್ಯನಿಗೆ ಬಂದಿದ್ದರೂ ಅವನ ತಲೆ ತಿರುಗಿಹೋಗುತ್ತಿತ್ತು ಎಂದು ಸ್ವಾಮಿ ವಿವೇಕಾನಂದರೆ ಅನಂತರ ಹೇಳುತ್ತಿದ್ದರು.

ಸ್ವಾಮಿ ವಿವೇಕಾನಂದರ ಆಗಿನ ಉಪನ್ಯಾಸಗಳಲ್ಲಿ ಒಂದು ಶಕ್ತಿ ಸಂಜೀವಿನಿ ಇದೆ. ಜನರ ಗಮನವನ್ನು ನಮ್ಮ ಗತವೈಭವದ ಕಡೆಗೆ ಮಾತ್ರ ಎಳೆಯಲಿಲ್ಲ. ಮುಂದೆ ಬರುವ ಹಿಂದಿನ ವೈಭವಗಳನ್ನೆಲ್ಲ ಮೀರುವ ಮತ್ತೊಂದು ಕಾಲಕ್ಕೆ ಅಣಿಯಾಗುವಂತೆ ಮಾಡಿದರು.

ದೇಶದಲ್ಲೆಲ್ಲಾ ಒಂದು ಪ್ರಚಂಡ ಸುಳಿಗಾಳಿಯಂತೆ ಸಂಚರಿಸಿದರು. ಶ್ರೀ ರಾಮಕೃಷ್ಣ ಮಹಾ ಸಂಘವನ್ನು ಸ್ಥಾಪಿಸಿದರು. ಯುವಕರು, ವಿದ್ಯಾವಂತರು, ಧರ್ಮಬುದ್ಧಿಯುಳ್ಳವರು ಹಲವರು ಅದಕ್ಕೆ ಸೇರಿದರು. ಭರತಖಂಡದ ನಾನಾಕಡೆಗಳಲ್ಲಿ ಅದರ ಶಾಖೆಯನ್ನು ತೆರೆದರು. ಸಂಘದ ಮುಂದೆ ನಮ್ಮ ಮುಕ್ತಿ ಜತೆಗೆ ಜಗದ ಹಿತ ಎಂಬ ಆದರ್ಶವನ್ನು ಇಟ್ಟರು. ಆಧುನಿಕ ಜೀವನಕ್ಕೆ ಹೊಂದಿಕೊಳ್ಳುವ ಹಿಂದಿನ ತ್ಯಾಗ ವೈರಾಗ್ಯವನ್ನು ಬಿಡದ ಒಂದು ಕರ್ಮಯೋಗಿಗಳ ಸೇನೆ ಇವರ ಸಂನ್ಯಾಸಿ ಶಿಷ್ಯರು. ಅವರು ವೇದಾಂತದಲ್ಲಿ ನುರಿತಿರಬೇಕು.

ಧ್ಯಾನದಲ್ಲಿ ಕುಳಿತುಕೊಳ್ಳಬಲ್ಲವರಾಗಿರಬೇಕು. ಎಂತಹ ಕೆಲಸ
ಕೂಡ ಮಾಡಲು ಸಿದ್ಧರಾಗಿರಬೇಕು. ಮೇಲು ಕೀಳೆಂಬ ಭಾವನೆ
ಡದು. ಸಂಘದ ಕಾರ್ಯಸಾಧನೆಯಲ್ಲಿ ನಿರತರಾದಾಗ ಅಪಾಯ
ಸೋಲು ಎಲ್ಲವನ್ನೂ ನಿಕೃಷ್ಟ ದೃಷ್ಟಿಯಿಂದ ನೋಡಬೇಕು.
ಪರೋಪಕಾರಕ್ಕಾಗಿ ಹಲವು ಸಂಸ್ಥೆಗಳನ್ನು ತೆರೆದರು. ಆಸ್ಪತ್ರೆ
ವಿದ್ಯಾಸಂಸ್ಥೆಗಳು, ಅಶಕ್ತಪೋಷಕಾಲಯಗಳು. ಯಾಂತ್ರಿಕ
ಔದ್ಯೋಗಿಕ ಶಿಕ್ಷಣಾಲಯಗಳು ಮುಂತಾದುವನ್ನು ತೆರೆದರು.
ಾನ, ವಿದ್ಯಾದಾನ, ಜ್ಞಾನದಾನಗಳ ಕಡೆಗೆ ಮನಸ್ಸು ಕೊಟ್ಟರು.
ವ ಕೆಲಸವನ್ನು ಭಗವಂತನ ಸೇವೆ ಎಂದು ಮಾಡಿ ಎಂದರು.
ನ ಉದ್ಧಾರಕ್ಕೆ ಯತ್ನಿಸಬೇಡಿ. ಜಗತ್ತು ಉದ್ಧಾರವಾಗುವುದು
ಮಗಾಗಿ ಕಾಯುತ್ತಿಲ್ಲ. ನಿಮ್ಮ ಉದ್ಧಾರಕ್ಕಾಗಿ ಇನ್ನೊಬ್ಬರಿಗೆ
ಮಾಡಿ. ದೇವರು ಹಲವು ರೂಪು ಧರಿಸಿ ಬರುವನು, ದುರುಳನಂತೆ
ು, ಪಾಪಿಯಂತೆ ಬರುವನು, ದರಿದ್ರನಂತೆ ಬರುವನು, ರೋಗಿ
ಬರುವನು, ಮೂರ್ಖನಂತೆ ಬರುವನು. ನಿಮ್ಮ ಕೈಲಾದ ಸೇವೆ
ಮಾಡಿ. ಆದರೆ ಯಾವ ಫಲವನ್ನು ಅಪೇಕ್ಷಿಸಬೇಡಿ. ಮತ್ತೊಬ್ಬ
ಮಾಡಿದ ಉಪಕಾರದಿಂದ ನಮ್ಮ ಮನಸ್ಸು ನಿರ್ಮಲವಾಗುವುದು.
ಲವಾದ ಮನಸ್ಸಿನಲ್ಲಿ ದೇವರ ಪ್ರತಿಬಿಂಬ ಕಾಣುವುದು. ಜ್ಞಾನ
, ರಾಜಯೋಗ, ಭಕ್ತಿಯೋಗ, ಕರ್ಮಯೋಗದ ಮೇಲೆ ಉಪ
ಗಳನ್ನು ಮಾಡಿದರು. ದೇಶಭಕ್ತಿಯಿಂದ ತುಂಬಿ ತುಳುಕಾಡುವ
ಶವನ್ನು ಸಾರಿದರು. ಅವರ ಕೆಲವು ಭಾವಗಳು ಮುಂದೆ
ದು.

* * * * * *

ಭರತಖಂಡದಲ್ಲಿರುವ ಮೂವತ್ತು ಮೂರು ಕೋಟಿ ದೇವರು
ನೀವು ನಂಬಿದರೂ ಕೊನೆಗೆ ನಿಮ್ಮಲ್ಲಿ ನಿಮಗೆ ನಂಬಿಕೆಯಿಲ್ಲದಿದ್ದರೆ
ಯಿಲ್ಲ, ಮೊದಲು ಆತ್ಮಶ್ರದ್ಧೆ, ಅದರ ಮೇಲೆ ನಿಲ್ಲಿ.

ಜಗದ ಇತಿಹಾಸ ತಮ್ಮಲ್ಲಿ ನಂಬಿಕೆ ಇದ್ದ ಎಲ್ಲೋ ಕೆಲವರ ಆತ್ಮ ಕಥೆ. ಅವರು ಹೇಳಿದಂತೆ ಇಡೀ ಜನಾಂಗ ಕೇಳುವುದು. ಅವರು ಮಾಡಿದಂತೆ ಮಾಡುವರು. ಅವರ ಮಾತಿನಲ್ಲಿ ಅವರ ಜೀವನದಲ್ಲಿ ಇಂತಹ ಶಕ್ತಿ ಇದೆ. ಈ ಶಕ್ತಿಯ ಮೂಲ ಆತ್ಮ ಶ್ರದ್ಧೆ.

ಯಾರಿಗೆ ದೇವರಲ್ಲಿ ನಂಬಿಕೆ ಇಲ್ಲವೊ ಅವರನ್ನು ನಾಸ್ತಿಕನೆಂದು ಹಿಂದಿನ ಧರ್ಮ ಸಾರಿತು. ಇಂದಿನ ಧರ್ಮ ಯಾರಿಗೆ ತಮ್ಮಲ್ಲಿ ನಂಬಿಕೆ ಇಲ್ಲವೊ ಅವರನ್ನು ನಾಸ್ತಿಕರೆನ್ನುವುದು.

ನಿಮ್ಮ ಮುಕ್ತಿಯನ್ನು ಮಾತ್ರ ನೀವು ಗಳಿಸುವುದಕ್ಕೆ ಹೋದರೆ ನೀವು ನರಕಕ್ಕೆ ಹೋಗುವಿರಿ. ಉಳಿದವರ ಮುಕ್ತಿಗೆ ನಾವು ಕಾತುರ ರಾಗಬೇಕು. ಮತ್ತೊಬ್ಬರ ಸೇವೆ ಮಾಡುವಾಗ ನರಕಕ್ಕೆ ಹೋದರೂ ನಿಮ್ಮ ಸ್ವಂತ ಮುಕ್ತಿಯನ್ನು ಗಳಿಸುವುದಕ್ಕಿಂತ ಮೇಲು.

ಎಲ್ಲಿಯವರೆಗೆ ಹೊಟ್ಟೆಗೆ ಹಿಟ್ಟಿಲ್ಲದ ಸಾವಿರಾರು ಜನ ಸಾಯು ತ್ತಿರುವರೋ, ಅಲ್ಲಿಯವರೆಗೆ ಅವರ ಶ್ರಮದಿಂದ ವಿದ್ಯಾಭ್ಯಾಸವನ್ನು ಪಡೆದು ಅವರಿಗೆ ಮರುಗದ ಪ್ರತಿಯೊಬ್ಬ ವಿದ್ಯಾವಂತನನ್ನೂ ನಾನು ವಿಶ್ವಾಸ ಘಾತುಕನೆಂದು ಕರೆಯುತ್ತೇನೆ.

ಎಲ್ಲಿಯವರೆಗೆ ಒಂದು ನಾಯಿ ನನ್ನ ದೇಶದಲ್ಲಿ ಕೂಳಿಲ್ಲದೆ ನರಳು ತ್ತಿರುವುದೋ ಅಲ್ಲಿಯ ವರೆಗೆ ಅದಕ್ಕೆ ಅನ್ನ ನೀಡುವುದೇ ನನ್ನ ಪರಮ ಧರ್ಮ.

ದೇವರನ್ನು ಹುಡುಕಿಕೊಂಡು ನೀವು ಎಲ್ಲಿಗೆ ಹೋಗುತ್ತಿರಿ? ದರಿದ್ರರು, ದೀನರು, ದುಃಖಿಗಳು ಇವರೆಲ್ಲ ದೇವರಲ್ಲವೆ? ಮೊದಲು ಏತಕ್ಕೆ ನೀವು ಅವರನ್ನು ಪೂಜಿಸಬಾರದು? ಗಂಗಾನದಿಯ ತೀರದಲ್ಲಿ ಭಾವಿ ಯನ್ನು ನೀವು ಏತಕ್ಕೆ ತೋಡುವುದಕ್ಕೆ ಹೋಗುತ್ತೀರಿ? ಇವರು ನಿಮ್ಮ ದೇವರಾಗಲಿ. ಇವರನ್ನು ಕುರಿತು ಆಲೋಚಿಸಿ. ಇವರಿಗಾಗಿ ಯಾವಾ ಗಲೂ ಪ್ರಾರ್ಥಿಸಿ. ಭಗವಂತನು ನಿಮಗೆ ದಾರಿ ತೋರುವನು.

ಭಗವಂತನು ಕರುಣಾಮಯನಲ್ಲದೆ ಇದ್ದರೆ ಒಂದು ತೊಟ್ಟು ನೀರೂ ಸಾಗರದಲ್ಲಿ ಇರುತ್ತಿರಲಿಲ್ಲ. ಕುಬೇರನ ಮನೆಯಲ್ಲಿ ಒಂದು ಕುರುಡು

ಕಾಸೂ ಇರುತ್ತಿರಲಿಲ್ಲ. ಅವನು ಇಚ್ಛಿಸಿದರೆ ಮರಳು ಕಾಡಿನಲ್ಲಿ ನದಿಗಳು ಹರಿಯುತ್ತವೆ. ಭಿಕಾರಿ ಲಕ್ಷಾಧೀಶನಾಗುವನು. ಇದೇನು ಬಾಯಿ ಮಾತೋ ಅಥವಾ ಸತ್ಯವೊ? ಅಕ್ಷರಶಃ ಸತ್ಯ.

ಈ ನಮ್ಮ ಬಾಳು ನೀರಗುಳ್ಳೆಯಂತೆ. ಜಗತ್ತಿನ ಭೋಗಗಳು ಕ್ಷಣಿಕ. ಆದರೆ ಯಾರು ಮತ್ತೊಬ್ಬರಿಗಾಗಿ ಜೀವಿಸುತ್ತಾರೆಯೋ ಅವರು ನಿಜವಾಗಿ ಬದುಕುವರು. ಉಳಿದವರು ಬದುಕಿದ್ದರೂ ಸತ್ತಂತೆ.

ಕೆಲಸ ಯಾವುದೂ ಲೌಕಿಕವಲ್ಲ. ಕೆಲಸವೆಲ್ಲಾ ಒಂದು ಪ್ರಾರ್ಥನೆ, ಒಂದು ಪೂಜೆ.

ಅಂಜಿಕೆ ಬೇಡ. ಬೇಡುವುದರಲ್ಲಿಯೂ ಧೈರ್ಯವಿರಲಿ. ಭಗವಂತ ನನ್ನು ಕೊಡು ಎಂದು ಒತ್ತಾಯಮಾಡಬೇಕು. ಜಗನ್ಮಯಿಯ ನಿಜವಾದ ಭಕ್ತರು ವಜ್ರದಂತೆ ಅಭೇದ್ಯರು. ಸಿಂಹದಂತೆ ಕೆಚ್ಚೆದೆಯವರು. ಅವರ ಕಾಲ ಕೆಳಗೆ ಇಡೀ ಪ್ರಪಂಚವೆ ಪುಡಿಪುಡಿಯಾದರೂ ಅವರು ಸ್ವಲ್ಪವೂ ಅಂಜುವುದಿಲ್ಲ. ಜಗನ್ಮಾತೆ ನಿಮ್ಮ ಮಾತನ್ನು ಕೇಳುವಂತೆ ಮಾಡಿ. ಆಕೆಯನ್ನು ಗೋಗರೆಯಬೇಡಿ. ಸರ್ವಶಕ್ತಿಮಯಿ ಅವಳು ಇದನ್ನು ಜ್ಞಾಪಕದಲ್ಲಿಡಿ. ಅವಳು ಇಚ್ಛಿಸಿದರೆ ಕೆಲಸಕ್ಕೆ ಬಾರದ ಕಲ್ಲಿನಿಂದಲೂ ವೀರಾಧಿವೀರರನ್ನು ಸೃಷ್ಟಿ ಮಾಡಬಲ್ಲಳು.

ಸ್ವಾಮಿ ವಿವೇಕಾನಂದರಿಗೆ ಅಳುಮೋರೆಯನ್ನು ಕಂಡರೆ ಆಗದು. ಮನೆಯಿಂದ ಹೊರಗೆ ಹೋಗುವುದಕ್ಕೆ ಮುಂಚೆ ಕನ್ನಡಿಯಲ್ಲಿ ನೋಡಿಕೊಳ್ಳಿ. ಸಪ್ಪೆಯ ಮುಖವಾಗಿದ್ದರೆ ಹೊರಗೆ ಹೋಗಬೇಡಿ. ಪ್ರತಿಯೊಬ್ಬರ ಹೆಗಲ ಮೇಲೂ ಬೇಕಾದಷ್ಟು ದುಃಖದ ಹೊರೆ ಇದೆ. ಅದನ್ನು ಹೆಚ್ಚು ಮಾಡಲು ನಿಮಗೆ ಯಾವ ಅಧಿಕಾರವಿದೆ? ಅಳುಮೋರೆ ಒಂದು ಜಾಡ್ಯ. ಅದನ್ನು ಮತ್ತೊಬ್ಬರಿಗೆ ಹರಡಬೇಡಿ ಎನ್ನುತ್ತಿದ್ದರು.

ಜೀವನ ಪ್ರತಿಯೊಬ್ಬ ಜೀವಿಗೂ ದೇವರು ಕೊಟ್ಟ ಒಂದು ವರ. ಅದನ್ನು ಅಲ್ಲಗಳೆಯಬೇಡಿ. ಸಾಹಸದಿಂದ ಬಾಳಿ, ಸಂತೋಷದಿಂದ ಬಾಳಿ, ಶಾಂತಿಯಿಂದ ಬಾಳಿ.

ನಾವು ಕೆಲಸಕ್ಕೆ ಬಾರದವರೆಂದು ತಿಳಿದುಕೊಳ್ಳಬೇಡಿ. ಭಗವಂತನ

ಮಕ್ಕಳು ನಾವು. ನಾವೆ ಕೆಲಸಕ್ಕೆ ಬಾರದೆ ಹೋದರೆ ಇನ್ನಾರು ಕೆಲಸಕ್ಕೆ ಬರುವರು. ಮಹಾಶಕ್ತಿ ನಮ್ಮ ಹಿಂದೆ ಇದೆ. ಅದನ್ನು ಹೇಗೆ ಉಪಯೋಗಿಸಿಕೊಳ್ಳಬೇಕು ಎಂಬುದನ್ನು ತಿಳಿದುಕೊಳ್ಳಿ.

ಸ್ವಾಮಿ ವಿವೇಕಾನಂದರ ಉಪದೇಶವನ್ನು ಓದುವುದೆಂದರೆ ಹೇಡಿ ವೀರನಾಗುವನು, ಕಷ್ಟದ ಹೊರೆ ನಮ್ಮ ಹೆಗಲಿನಿಂದ ಜಾರುವುದು. ದುಃಖ ಮಾಯವಾಗುವುದು. ಕಣ್ಣೀರು ಆರುವುದು. ಎಂತಹ ನಾಸ್ತಿಕನಲ್ಲಿಯೂ ಒಂದು ದೈವಭಕ್ತಿ ಉದ್ದೀಪನವಾಗುವುದು.

ಯಾವ ಒಂದು ಮಹಾಕಾರ್ಯವನ್ನು ಶ್ರೀ ರಾಮಕೃಷ್ಣರು ಸ್ವಾಮಿ ವಿವೇಕಾನಂದರಿಗೆ ಬಿಟ್ಟು ಹೋದರೋ ಅದನ್ನು ವೀರ ಶಿಷ್ಯರು ಸಾಧಿಸಿದರು. ತಮ್ಮ ಸ್ವಂತ ಮುಕ್ತಿಯನ್ನು ಕೂಡ ಕಡೆಗಣಿಸಿ ಹಗಲು ರಾತ್ರೆ ದುಡಿದರು. ಇಡೀ ದೇಶಕ್ಕೆ ಒಂದು ನವ ಸಂದೇಶವನ್ನು ಸಾರಿದರು.

ಸ್ವಾಮಿಜಿಯವರಿಗೆ ಸುಮಾರು ಮೂವತ್ತೊಂಬತ್ತು ವರುಷ ತುಂಬಿತು. ವಿರಾಮವಿಲ್ಲದ ದುಡಿತದಿಂದ ದೇಹ ಬಾಡಿತು. ೧೯೦೨ ನೆ ಜುಲೈ ನಾಲ್ಕನೆಯ ತಾರೀಕು ಭಗವಂತನಲ್ಲಿ ಐಕ್ಯರಾದರು. ಎಂತಹ ಜೀವನ ಅವರದು! ಎಷ್ಟು ಘಟನೆಗಳಿಂದ ಕೂಡಿದೆ! ಅವರು ದುಡಿದದ್ದು ಸುಮಾರು ಹದಿನೈದು ವರುಷಗಳು. ಆದರೆ ಎಷ್ಟೊಂದು ಸಾಧಿಸಿದರು. ಮಲಗಿದ್ದ ಭರತ ಖಂಡವನ್ನು ಎಚ್ಚರಿಸಿದರು. ಭಾರತಾಂಬೆ ಬಂಜೆಯಾಗಿಲ್ಲ. ಹಿಂದೆ ಹೇಗೆ ದೊಡ್ಡ ಮಹಾತ್ಮರಿಗೆ ಜನ್ಮವಿತ್ತಳೋ ಹಾಗೆಯೇ ಈಗಲೂ ನೀಡುತ್ತಿರುವಳು. ಮುಂದೆಯೂ ಅನೇಕರಿಗೆ ನೀಡುವಳು. ಕೆಲಸಕ್ಕೆ ಬಾರದ ಜನಾಂಗವಲ್ಲ ನಾವು. ದೊಡ್ಡ ಪಿತ್ರಾರ್ಜಿತ ಆಸ್ತಿ ಇದೆ. ಅದನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದನ್ನು ಕಲಿತುಕೊಳ್ಳಬೇಕು. ಭಾರತೀಯನು ಅನ್ಯರೆದುರಿಗೆ ನಾಚಿಕೆಯಿಂದ ತಲೆ ತಗ್ಗಿಸಬೇಕಾಗಿಲ್ಲ. ಹೆಮ್ಮೆಯಿಂದ ತಲೆ ಎತ್ತಬೇಕು. ಸ್ವಾಮಿ ವಿವೇಕಾನಂದರು ಜನಾಂಗಕ್ಕೇ ಆತ್ಮಗೌರವವನ್ನು ಒದಗಿಸಿ ಕೊಟ್ಟರು.

ಬಾಳಿದರೆ ಹೀಗೆ ಬಾಳಬೇಕು. ಗಿಡದಂತೆ, ಮರದಂತೆ ನೂರಾರು ವರುಷ ಬದುಕಿದರೆ ಬಂತೆ ಭಾಗ್ಯ ! ಹುಟ್ಟಿದವರು ಎಂದಾದರೂ ಸಾಯಲೇ ಬೇಕು. ಯಾವ ಕೆಲಸಕ್ಕೂ ಬಾರದೆ ಬಿಸುಟ ಕಬ್ಬಿಣವೂ ತುಕ್ಕು ಹಿಡಿದು ಮಣ್ಣುಪಾಲಾಗುವುದು. ನೇಗಲಿನ ಕೊನೆಯಲ್ಲಿರುವ ಕಬ್ಬಿಣವೂ ಸವೆದು ಕೊನೆಗೆ ಮಣ್ಣುಪಾಲಾಗುವುದು. ಹೀಗೆ ನಮ್ಮ ಬಾಳನ್ನು ಸಾಹಸದಿಂದ ಸೇವೆಯಿಂದ ಸವೆಸಬೇಕು ಎಂದರು ಸ್ವಾಮಿ ವಿವೇಕಾನಂದರು.

---

# ಶ್ರೀ ರಾಮಕೃಷ್ಣ

ಕ್ರಿ.ಶ. ೧೮೫೭. ಸಿಪಾಯಿ ದಂಗೆ ಮೋಡಗಳು ಭರತಖಂಡವನ್ನು ಕ್ರಮೇಣ ಮುತ್ತುತ್ತಿವೆ ಭರತಖಂಡದಲ್ಲಿ ಎಲ್ಲೆಲ್ಲೂ ಆಂದೋಳನ; ಅತೃಪ್ತಿ ಕುದಿಯುತ್ತಿದೆ. ರಾಜಕೀಯ ಕ್ಷೇತ್ರದಲ್ಲೂ ದೊಡ್ಡದೊಂದು ಬಿರುಗಾಳಿ ಏಳುವುದಕ್ಕೆ ಸನ್ನಾಹವಾಗುತ್ತಿದೆ. ಅದೇ ಸಮಯ ಗಂಗಾ ನದಿ ತೀರದ ದಕ್ಷಿಣೇಶ್ವರ ದೇವಾಲಯದ ಸಮೀಪದಲ್ಲೂ ಪ್ರತಿದಿನವೂ ಸುಮಾರು ಇಪ್ಪತ್ತು ವರುಷದ ಯುವಕ ಸಂಜೆ ಹೊತ್ತು ದೇವಾಲಯ ದಿಂದ ಹೊರಗೆ ಬರುವನು. ಗಂಗಾನದಿಯ ಆಚೆ ತೀರದೆಡೆ ಮುಳುಗು ತ್ತಿರುವ ರವಿಯನ್ನು ನೋಡುವನು. ನಿಟ್ಟುಸಿರು ಬಿಡುವನು. "ಅಯ್ಯೊ ನನ್ನ ಜೀವನದಲ್ಲೂ ಆಗಲೇ ಒಂದು ದಿನ ಹೋಯಿತು. ಇನ್ನೂ ತಾಯಿ ಕಾಣಲಿಲ್ಲ" ಎಂದು ಕಂಬನಿ ದುಂಬಿ ಅಳುವನು. ನೆಲದ ಮೇಲೆ ಬಿದ್ದು ಹೊರಳಾಡುವನು. ನದಿಗೆ ಬಂದವರು ಹಿಂತಿರುಗಿ ಹೋಗುವಾಗ ಈ ದೃಶ್ಯವನ್ನು ನೋಡಿ, "ಅಯ್ಯೊ ಪಾಪ, ಈ ಹುಡುಗ ಹೆತ್ತತಾಯಿಗೆ ಅಳುತ್ತಿರುವನೇನೊ" ಎಂದು ಸಹಾನುಭೂತಿ ತೋರಿ ಮುಂದೆ ಸಾಗುವರು.

ಎಳೆ ಮಗು ನುರಿಯಾದ ತಾಯಿಗೆ ಎಷ್ಟು ಅಳುವುದೊ ಅಷ್ಟು ಅತ್ತರು ಜಗನ್ಮಾತೆಗೆ. ಅನುಮಾನಾಸ್ಪದವಾದ, ಕಣ್ಣಿಗೆ ಕಾಣದ ದೇವರಿ ಗಾಗಿ ಅಷ್ಟು ವ್ಯಥೆಪಟ್ಟವರು ಅಪರೂಪ ಧಾರ್ಮಿಕ ಜೀವನದಲ್ಲಿ. ಕೊನೆಗೆ ನಿರಾಶರಾಗಿ ಗರ್ಭಗುಡಿಯ ಮುಂದೆ ಬಲಿಕೊಡುವ ಖಡ್ಗವನ್ನು ತೆಗೆದುಕೊಂಡು ದೇವರೆದುರಿಗೆ ತಮ್ಮ ರುಂಡವನ್ನು ಈಡಾಡುವುದರಲ್ಲಿದ್ದರು. ತಕ್ಷಣ ದೇವಿ ಪ್ರತ್ಯಕ್ಷಳಾದಳು. ಯುವಕನ ಮನಸ್ಸು ಪ್ರಪಂಚವನ್ನು ತೊರೆದು ಅವರ್ಣನೀಯ ಆನಂದದಲ್ಲಿ ತಲ್ಲೀನವಾಯಿತು. ದೇವರು ಪರೀಕ್ಷಿಸುವನು. ನಮ್ಮ ಸರ್ವಸ್ವವನ್ನೂ ತೆತ್ತಿದಲ್ಲದೆ ಬರುವುದಿಲ್ಲ. ನಮ್ಮೆಲ್ಲವನ್ನೂ ದೇವರಿಗೆ ಕೊಟ್ಟರೆ ದೇವರು ತನ್ನ ಎಲ್ಲವನ್ನೂ ಭಕ್ತನಿಗೆ ಕೊಡುವನು. ತನ್ನ ಇಡೀ ಜೀವನವನ್ನು ನಿವೇದಿಸಿ ಜಗನ್ಮಾತೆಯನ್ನು



ಶ್ರೀ ರಾಮಕೃಷ್ಣ ಪರಮಹಂಸ ದೇವರು

'' ಈಶ್ವರಲಾಭವೇ ಮನುಷ್ಯ ಜೀವನದ ಉದ್ದೇಶ್ಯ ''

ಪಡೆದುಕೊಂಡರು. ಈ ವ್ಯಕ್ತಿಯೇ ಮುಂದೆ ಜಗದ್ವಂದ್ಯ ಶ್ರೀರಾಮಕೃಷ್ಣ ಪರಮಹಂಸರಾದುದು.

ಸ್ವಾಮಿ ವಿವೇಕಾನಂದರು ಹೇಳಿರುವಂತೆ ಪರಮಹಂಸರ ಜೀವನ ವೇದವೇದಾಂತಗಳಿಗೆ ಬರೆದಿರುವ ಸಚೇತನ ಭಾಷ್ಯ. ಮೂವತ್ತು ಕೋಟಿ ಭಾರತೀಯರ ಎರಡು ಸಾವಿರ ವರುಷಗಳ ಜೀವನವನ್ನು ಇವರು ತಮ್ಮ ಒಂದು ಜೀವನದಲ್ಲಿ ಅಳವಡಿಸಿಕೊಂಡಿರುವರು. ಇವರ ಜೀವನ ದ್ವೈತ ಅದ್ವೈತ ವಿಶಿಷ್ಟ ಅದ್ವೈತಗಳ ತ್ರಿವೇಣೀ. ಭಗವಂತನನ್ನು ಹಲವಾರು ಭಾವಗಳಲ್ಲೂ ಕಂಡು ಪ್ರೀತಿಸಿದರು. ಜ್ಞಾನ ,ಭಕ್ತಿ ಯೋಗ, ಇಲ್ಲಿ ಸಂಧಿಸಿವೆ. ಇವರ ಜೀವನವೆ ಒಂದು ದೊಡ್ಡ ವಿಶ್ವಧರ್ಮ ಸಮ್ಮೇಳನ. ಹೊರಗೆ ನೋಡುವುದಕ್ಕೆ ಎಳೆಸಗೆ ಸರ್ವದಾ ಇವರ ಮುಖ ದಲ್ಲಿ ಚಿಮ್ಮುತ್ತಿದೆ. ಅದರ ಹಿಂದೆ ರೋಮಾಂಚನಕಾರಿಯಾದ ಆಧ್ಯಾತ್ಮಿ ಘಟನಾವಳಿ ತುಂಬಿತುಳುಕಾಡುತ್ತಿವೆ.

ಇವರು ಘನ ವಿದ್ವಾಂಸರ ಗುಂಪಿಗೆ ಸೇರಿದವರಲ್ಲ. ದೊಡ್ಡ ವಾಗ್ಮಿ ಗಳಲ್ಲ. ಉಪನ್ಯಾಸ ಕೊಡುವುದಕ್ಕೆ ಎಲ್ಲೂ ಹೊರಗೆ ಹೋಗಲಿಲ್ಲ. ತಮ್ಮ ಬಾಳನ್ನೆಲ್ಲ ಬಹುಪಾಲು ದಕ್ಷಿಣೇಶ್ವರ ದೇವಾಲಯದ ವಲಯದಲ್ಲಿ ಕಳೆದರು. ಆದರೂ ಅಪರೂಪವಾಗಿ ಅರಳಿದ ಸಹಸ್ರದಳ ಕಮಲವಿದು. ಇಡೀ ಬದ್ಧಜೀವಿಗಳ ಉದ್ಧಾರಕ್ಕೆ ಬೇಕಾಗುವ ಧರ್ಮಾಮೃತ ಅಲ್ಲಿ ಹುದುಗಿತ್ತು. ಹಲವಾರು ಕಡೆಯಿಂದ ದುಂಬಿಗಳು ಬಂದವು. ಮಕರಂದವನ್ನು ಹೀರಿ ತೃಪ್ತರಾದವು. ಅದನ್ನು ಉಳಿದವರಿಗೆಲ್ಲ ಹಂಚಿ ಧನ್ಯರಾದವು. ಪಾಶ್ಚಾತ್ಯ ದೇಶಗಳಿಗೂ ಹಂಚಿ ಭರತಖಂಡಕ್ಕೆ ಮಾನ್ಯತೆ ತಂದವು.

ಚಿರಾಯುವಾದ ಭರತ ಮಾತೆಯ ಶ್ರೇಷ್ಠತಮ ಪುತ್ರರಲ್ಲಿ ಶ್ರೀ ರಾಮಕೃಷ್ಣಪರಮಹಂಸರೊಬ್ಬರು.

ಬಂಗಾಳ ಪ್ರಾಂತದಲ್ಲಿ ಹೂಗ್ಲಿ ಜಿಲ್ಲೆಯಲ್ಲಿ ಕುಮಾರಪುರವೆಂಬ ಸಣ್ಣದೊಂದು ಗ್ರಾಮ. ಕಲ್ಕತ್ತೆಯಿಂದ ಸುಮಾರು ಅರವತ್ತು ಮೈಲಿ ದೂರದಲ್ಲಿತ್ತು. ಈಗಿನ ಕಾಲದ ವಾಹನ ಸೌಕರ್ಯಗಳಾವುವೂ ಅಲ್ಲಿಗೆ ಇನ್ನೂ ಬಂದಿರಲಿಲ್ಲ. ಹತ್ತಿರದ ರೈಲ್ವೆ ಸ್ಟೇಷನ್ನಿಗೆ ಸುಮಾರು ಇಪ್ಪ

ತ್ತೈದು ಮೈಲಿ. ಹಳ್ಳಿ ಸಣ್ಣದು. ಆದರೂ ಜನರು ನೆಮ್ಮದಿಯಾಗಿದ್ದರು. ಸುತ್ತಮುತ್ತಲೂ ಕಮಲ ಪುಷ್ಕರಣಿ ತೋಪು, ಇವುಗಳ ಹಿಂದೆ ಹಸರು ಗದ್ದೆಯ ಬಯಲು. ಅಲ್ಲಿ ಖುದಿರಾಮಚಟ್ಟೋಪಾಧ್ಯಾಯ ಮತ್ತು ಚಂದ್ರಮಣಿ ದೇವಿ ಎಂಬ ಬ್ರಾಹ್ಮಣ ಕುಟುಂಬವಿತ್ತು. ಬಡವರಾದರೂ ದೊಡ್ಡ ದೈವಭಕ್ತರು. ಯಾವ ಅಧಿಕಾರ ಇವರಿಗೆ ಇಲ್ಲದೇ ಇದ್ದರೂ ಜನರು ಇವರ ಜೀವನ ಗಾಂಭೀರ್ಯದೆದುರಿಗೆ ತಗ್ಗಿ ನಡೆಯುತ್ತಿದ್ದರು. ಭಕ್ತರು ಪರೋಪಕಾರಿಗಳು ಎಂದು ಪ್ರಖ್ಯಾತರಾಗಿದ್ದರು. ಇವರಿಗೆ ಕ್ರಿ.ಶ. ೧೮೩೬ ನೇ ಫೆಬ್ರವರಿ ೧೮ ನೇ ದಿನ ಹುಟ್ಟಿದ ನಾಲ್ಕನೆಯ ಮಗುವೆ ಶ್ರೀರಾಮಕೃಷ್ಣ. ಮಗು ಹುಟ್ಟಿದಾಗ ಗದಾಧರನೆಂದು ನಾಮಕರಣ ಮಾಡಿ ಕ್ರಮೇಣ ಶ್ರೀರಾಮಕೃಷ್ಣರೆಂಬ ಹೆಸರು ಅವರಿಗೆ ಸೇರಿ, ನಂತರ, ಕೊನೆಯದೇ ಪ್ರಖ್ಯಾತವಾಗಿ ನಿಂತಿತು.

ಮಗುವು ಮನೆಯವರಿಗೆ ಮಾತ್ರ ಮುದ್ದಾಗಿ ಇರಲಿಲ್ಲ ಇಡೀ ಹಳ್ಳಿಯೆ ಆ ಮಗುವನ್ನು ನೋಡಿ ಸಂತೋಷಗೊಂಡಿತು. ಎಲ್ಲರಿಗೂ ಬೇಕಾದ ಮಗುವಾಯಿತು. ಮಗುವಿಗೆ ಸುಮಾರು ಐದು ಆರನೆ ವರ್ಷ ತುಂಬುವ ಹೊತ್ತಿಗೆ, ದೇವದೇವಿಯರಿಗೆ ಹಲವು ಸ್ತೋತ್ರಗಳು, ರಾಮಾಯಣ ಮಹಾಭಾರತದ ಕಥೆ ಇವನ್ನು ಕಲಿತುಕೊಂಡಿತು.

ಬಾಲ್ಯದಿಂದಲೂ ಅವರ ಕೆಲವು ಸ್ವಭಾವ ಬಹಳ ಚೆನ್ನಾಗಿ ರೂಪುಗೊಳ್ಳುತ್ತಿತ್ತು. ಸ್ವಲ್ಪವೂ ಅಂಜಿಕೆ ಸ್ವಭಾವದವರಲ್ಲ. ಉಳಿದ ಮಕ್ಕಳು ಎಲ್ಲಿಗೆ ಹೋಗುವುದಕ್ಕೆ ಅಂಜುತ್ತಿದ್ದರೋ ಅಲ್ಲಿಗೆ ಧೈರ್ಯವಾಗಿ ಹೋಗುತ್ತಿದ್ದರು. ಸ್ಮಶಾನ ಸಾಧಾರಣ ಎಂತಹವನಿಗಾದರೂ ಸ್ವಲ್ಪ ಅಂಜಿಕೆ ಕೊಡುವ ಸ್ಥಳ. ಅಂತಹ ಕಡೆ ಒಬ್ಬರೇ ನಿರ್ಭಯವಾಗಿ ಹೋಗುತ್ತಿದ್ದರು. ಯಾರೂ ಇವರಿಗೆ ಇಚ್ಛೆ ಇಲ್ಲದುದನ್ನು ಕೋಪದಿಂದ ಅಥವಾ ಅಂಜಿಸಿ ಮಾಡಿಸುವುದಕ್ಕೆ ಆಗುತ್ತಿರಲಿಲ್ಲ. ಯಾರಿಗಾದರೂ ಒಮ್ಮೆ ಮಾತು ಕೊಟ್ಟರೆ ಸಾಕು, ಏನಾದರೂ ಆಗಲಿ ಅದನ್ನು ನಡೆಸಿಕೊಡುತ್ತಿದ್ದರು. ಉಪನಯನದ ಸಮಯದಲ್ಲಿ ಮೊದಲ ಭಿಕ್ಷೆವನ್ನು ಅವರ ಕುಲಕ್ಕೆ ಸೇರಿದ ಹಿರಿಯರಿಂದ ತೆಗೆದುಕೊಳ್ಳುವುದು ರೂಢಿ. ಬಾಲ್ಯ

ದಿಂದಲೂ ಧನಿ ಎಂಬುವ ಅಕ್ಕಸಾಲಿಗ ಹೆಂಗಸು ಇವರನ್ನು ಪ್ರೀತಿಸು ತ್ತಿದ್ದಳು. ಅವಳು ಒಂದು ದಿನ ಮಗುವನ್ನು ಉಪನಯನದ ಸಮಯ ದಲ್ಲಿ ನನ್ನಿಂದ ಭಿಕ್ಷೆವನ್ನು ತೆಗೆದುಕೊಳ್ಳಬೇಕೆಂದು ಬೇಡಿಕೊಂಡಳು. ಶ್ರೀರಾಮಕೃಷ್ಣರು ಅದಕ್ಕೆ ಒಪ್ಪಿಗೆ ಇತ್ತರು. ಇವರಿಗೆ ಒಂಭತ್ತು ವರುಷದ ಸಮಯಕ್ಕೆ ಉಪನಯನವಾಯಿತು. ಆ ಸಮಯದಲ್ಲಿ ಯಾರು ಎಷ್ಟು ಆಕೆಯಿಂದ ಭಿಕ್ಷೆ ತೆಗೆದುಕೊಳ್ಳದಂತೆ ಹೇಳಿದರೂ ಕೇಳಲಿಲ್ಲ ಕೊನೆಗೂ ಧನಿಯೆಂಬ ಅಕ್ಕಸಾಲಿಗಳಿಂದ ಮೊದಲು ಭಿಕ್ಷೆವನ್ನು ಸ್ವೀಕರಿ ಸಿದರು. ಸಾಧಾರಣವಾಗಿ ಆ ವಯಸ್ಸಿನಲ್ಲಿ ದೊಡ್ಡವರು ಹೇಳಿದಂತೆ ಕೇಳುವುದು ಸ್ವಭಾವ. ಅಂತಹ ವಯಸ್ಸಿನಲ್ಲಿಯೇ ಅವರ ಜೀವನದಲ್ಲಿ ಸತ್ಯಕ್ಕಾಗಿ ಏನನ್ನಾದರೂ ಸಹಿಸುವ ಶಕ್ತಿಯನ್ನು ನೋಡುತ್ತೇವೆ.

ರಾಮಕೃಷ್ಣರನ್ನು ಹಳ್ಳಿಯ ಶಾಲೆಗೆ ಹಾಕಿದರು. ಶಾಲೆಯಲ್ಲಿ ಓದುವುದು ಬರೆಯುವುದರಲ್ಲಿ ಸ್ವಲ್ಪ ಆಸಕ್ತಿ ತೋರಿದರೂ ಗಣಿತ ತಲೆಗೆ ಹತ್ತಲಿಲ್ಲ. ಶಾಲೆಯೊಳಗೆ ಕುಳಿತು ಓದುವುದಕ್ಕಿಂತ ಹತ್ತಿರಿದ್ದ ತೋಪಿ ನಲ್ಲಿ ಆಡುವುದಕ್ಕೆ ಇವರಿಗೆ ಆಸಕ್ತಿ. ಕೆಲವು ವೇಳೆ ಶಾಲಾ ಉಪಾ ಧ್ಯಾಯರು ಬರುವುದು ತಡವಾದರೆ ಹುಡುಗರೊಂದಿಗೆ ಹತ್ತಿರವಿರುವ ತೋಪಿಗೆ ಹೋಗಿ ಅವರು ನೋಡಿದ್ದ ಬಯಲಾಟವನ್ನು ಆಡುತ್ತಿದ್ದರು. ಅದಕ್ಕೆ ಸಂಬಂಧಪಟ್ಟ ಹಾಡು, ನಟನೆ ಇವುಗಳನ್ನು ಅಭಿನಯಿಸುವುದರಲ್ಲಿ ತುಂಬಾ ಪಾಂಡಿತ್ಯವನ್ನು ತೋರಿದರು. ಪ್ರಚಂಡ ಜ್ಞಾಪಕಶಕ್ತಿ. ಹಾಡನ್ನು ಒಂದು ಸಲ ಕೇಳಿದರೆ ಸಾಕು, ಅದನ್ನು ನೆನಪಿನಲ್ಲಿಡುತ್ತಿದ್ದರು, ಅದರಂತೆ ಅಭಿನಯಿಸುತ್ತಿದ್ದರು.

ಶ್ರೀರಾಮಕೃಷ್ಣರು ಹುಟ್ಟು ಕಲೋಪಾಸಕರು. ಬಾಹ್ಯ ಪ್ರಪಂ ಚದ ಮನಸೆಳೆವ ಬಣ್ಣ, ಆಕಾರ, ಭಾವ, ಧ್ವನಿ ಇವುಗಳೆಲ್ಲಾ ಇಂದ್ರಿಯಾ ತೀತ ಪ್ರಪಂಚದೆಡೆಗೆ ಇವರನ್ನು ಬೀಸಿ ಕರೆಯುತ್ತಿತ್ತು. ಪರಮಹಂಸರಿಗೆ ಆರೇಳು ವರುಷದ ಸಮಯ. ಆಗ ಒಂದು ದಿನ ಹಸುರು ಗದ್ದೆಯ ಬಯಲಿನಲ್ಲಿ ನಡೆಯುತ್ತಿದ್ದರು. ಕೈಯಲ್ಲಿದ್ದ ಒಂದು ಸಣ್ಣ ಬಟ್ಟೆಯಲ್ಲಿ ಪುರಿಯಿತ್ತು. ಅದನ್ನು ತಿನ್ನುತ್ತಾ ಸುತ್ತಲು ನೋಡುತ್ತಾ ಹೋಗು

ತ್ತಿದ್ದರು. ಸುತ್ತಲೂ ಹಸರು ಗದ್ದೆ, ಮೇಲೆ ಅಕಸ್ಮಾತ್ ಮೋಡ ಕವಿ ಯಿತು. ಅದು ಕ್ರಮೇಣ, ವಿಸ್ತಾರವಾಗಿ ಆಕಾಶವನ್ನೆಲ್ಲಾ ವ್ಯಾಪಿಸಿತು. ಅದರ ಕೆಳಗೆ ಬಕಪಕ್ಷಿಯ ಸಾಲು ಹಾರಿಹೋಗುತ್ತಿತ್ತು. ಈ ಬಣ್ಣಗಳ ವೈವಿಧ್ಯತೆಯನ್ನು ನೋಡಿದಾಗ ಅವರ ಮನಸ್ಸಿಗೆ ಯಾವ ಇಂದ್ರಿಯಾತೀತ ಸತ್ಯ ಹೊಳೆಯಿತೊ ತಿಳಿಯದು. ಸಂಪೂರ್ಣವಾಗಿ ತನ್ಮಯರಾಗಿ ಬಾಹ್ಯ ಪ್ರಪಂಚವನ್ನು ಮರೆತುಬಿಟ್ಟರು. ಹತ್ತಿರಿದ್ದವರು ಅವರನ್ನು ಮನೆಗೆ ಕರೆದುಕೊಂಡು ಬಂದರು. ಸ್ವಲ್ಪ ಹೊತ್ತಾದ ಮೇಲೆಯೇ ಅವರಿಗೆ ಬಾಹ್ಯಪ್ರಜ್ಞೆ ಬಂದುದು. ಆಗ ತಮ್ಮ ಮನಸ್ಸು ಇಂದ್ರಿಯಾ ತೀತ ಪ್ರಪಂಚದಲ್ಲಿ ಅವರ್ಣನೀಯ ಆನಂದದಲ್ಲಿ ತಲ್ಲೀನವಾಗಿತ್ತು ಎಂದರು.

ಒಂದು ದಿನ ಶಿವರಾತ್ರಿ. ಅಂದು ಜಾಗರಣೆ ಮಾಡಿ ಶಿವಪೂಜೆ ಮಾಡಬೇಕೆಂದು ಅಣಿಯಾಗುತ್ತಿದ್ದರು. ಅಂದು ಊರಿನವರೆಲ್ಲರ ಜಾಗರಣೆಗೆಂದು ಬಯಲು ನಾಟಕ ಒಂದನ್ನು ಆಡಲು ಕೆಲವರು ಅಣಿ ಯಾಗುತ್ತಿದ್ದರು. ರಾತ್ರಿಯಾಯಿತು. ನಾಟಕ ಆರಂಭವಾಗುವ ಸಮಯ ಬಂದರೂ ಶಿವಪಾತ್ರಧಾರಿ ಬರಲಿಲ್ಲ. ವಿಚಾರಿಸುವಲ್ಲಿ ಅವನಿಗೆ ಅನಾರೋಗ್ಯವೆಂದು ತಿಳಿದುಬಂದಿತು. ಆಗ ಸ್ನೇಹಿತರು ಬಂದು ಶ್ರೀ ರಾಮಕೃಷ್ಣರನ್ನು ಶಿವಪಾತ್ರವನ್ನು ವಹಿಸಿಕೊಳ್ಳಬೇಕೆಂದು ಕೇಳಿಕೊಂ ಡರು. ಮೊದಲು ಒಪ್ಪಲಿಲ್ಲ. ಪೂಜೆ, ಜಾಗರಣೆಯಲ್ಲಿ ಮನೆಯಲ್ಲಿ ಕಾಲ ಕಳೆಯಬೇಕೆಂದಿರುವೆ ಎಂದರು. ಬಂದವರು, ಪಾತ್ರಮಾಡಿದರೂ ಶಿವ ನನ್ನು ಕುರಿತು ಚಿಂತಿಸುತ್ತಲೇ ಇರಬೇಕಾಗುವುದು ; ಅದರಿಂದ ನೀನು ಶಿವನ ಧ್ಯಾನವನ್ನು ಮಾಡಿದಂತೆಯೆ, ಎಂದು ಸಮಾಧಾನ ಮಾಡಿದಮೇಲೆ ಒಪ್ಪಿಕೊಂಡರು. ಶಿವನಂತೆ ಭಸ್ಮ ಬಳಿದುಕೊಂಡು ಜಟಾಧಾರಿಯಾಗಿ ರಂಗಭೂಮಿಯ ಮೇಲೆ ಬಂದು ನಿಂತರು. ರಾಮಕೃಷ್ಣರು ತಾವು ಪಾತ್ರ ಮಾಡುತ್ತಿರುವೆನು ಎಂಬುದನ್ನು ಮರೆತು ಶಿವ ಧ್ಯಾನದಲ್ಲಿ ತಲ್ಲೀನರಾದರು. ಕಣ್ಣಿನಿಂದ ಆನಂದ ಬಾಷ್ಪ ಸುರಿಯ ತೊಡಗಿತು. ಬಾಹ್ಯ ಪ್ರಪಂಚದ ಅರಿವನ್ನು ಮರೆತರು. ನೆರೆದ ಪ್ರೇಕ್ಷಕ ವೃಂದಕ್ಕೆ

ಶಿವನ ಪಾತ್ರಧಾರಿ ಕಾಣಲಿಲ್ಲ. ಶಿವನಲ್ಲಿ ಐಕ್ಯನಾದ ಗಾಢ ಶಿವಭಕ್ತನು ಕಂಡನು. ಪಾತ್ರ ಮಾಡಲು ಇವರಿಂದ ಸಾಗಲಿಲ್ಲ. ಹತ್ತಿರಿದ್ದವರು ಹಾಗೆಯೇ ಇವರನ್ನು ಮನೆಗೆ ಕರೆದುಕೊಂಡು ಹೋದರು. ಮಾರನೇ ದಿನವೇ ಇವರಿಗೆ ಜನರ ಅರಿವುಂಟಾಗಿದ್ದು.

ಮತ್ತೊಂದು ದಿನ ಮೂರು ಮೈಲಿಗಳ ದೂರದಲ್ಲಿದ್ದ ವಿಶಾಲಾಕ್ಷಿಯ ದೇವಸ್ಥಾನಕ್ಕೆ ಕೆಲವು ಹೆಂಗಸರೊಂದಿಗೆ ಹೋಗುತ್ತಿದ್ದರು. ನಡೆದುಕೊಂಡು ಹೋಗುತ್ತಿರುವಾಗ ದೇವಿಗೆ ಸಂಬಂಧಪಟ್ಟ ಹಲವು ಹಾಡನ್ನು ಹೇಳುತ್ತಿದ್ದರು. ತಕ್ಷಣವೇ ಶ್ರೀರಾಮಕೃಷ್ಣರು ಸ್ಥಿರವಾಗಿ ನಿಂತರು. ಕಣ್ಣಿನಲ್ಲಿ ಅಶ್ರುಧಾರೆ ಹರಿಯತೊಡಗಿತು. ಪ್ರಪಂಚದ ಅರಿವೇ ಇವರಿಗೆ ಇರಲಿಲ್ಲ. ಹತ್ತಿರವಿದ್ದ ಹೆಂಗಸರು ಎಷ್ಟು ಶೈತ್ಯೋಪಚಾರ ಮಾಡಿದರೂ ಇವರಿಗೆ ಪ್ರಜ್ಞೆ ಬರಲಿಲ್ಲ. ಕೆಲವರು ದೇವರ ಹೆಸರನ್ನು ಇವರ ಕಿವಿಯಲ್ಲಿ ಹೇಳಿದಾಗ ಬಾಹ್ಯ ಪ್ರಪಂಚದ ಅರಿವಾಯಿತು.

ಹಲವು ದೇವದೇವಿಯರ ವಿಗ್ರಹವನ್ನು ತಾವೆ ಮಾಡಿ ಪೂಜಿಸುತ್ತಿದ್ದರು.

ಶ್ರೀರಾಮಕೃಷ್ಣರ ಏಳನೇ ವಯಸ್ಸಿನಲ್ಲಿ ಇವರ ತಂದೆ ಕಾಲವಾದರು. ಮಗು ಮೊದಲ ಬಾರಿ ತನ್ನ ಹತ್ತಿರದವರ ಸಾವನ್ನು ನೋಡಬೇಕಾಯಿತು. ಮೊದಲೇ ಅಂತರ್ಮುಖಿಗಳ ಸ್ವಭಾವ. ಈ ದಾರುಣ ಪೆಟ್ಟು ತಾಕಿದಾಗ ಜಗ ನಶ್ವರವೆಂಬ ಭಾವನೆ ಚಿರಮುದ್ರಿತವಾಯಿತು. ಇವರ ತಾಯಿಗೆ ಪತಿ ಅಗಲಿಕೆ ದಾರುಣ ವ್ಯಥೆಯನ್ನುಂಟು ಮಾಡಿತು. ಮಗು ಇದನ್ನೂ ಕಣ್ಣಾರೆ ನೋಡಬೇಕಾಯಿತು. ಸಾಧ್ಯವಾದ ಮಟ್ಟಿಗೆ ಯಾವಾಗಲೂ ತಾಯಿಯ ಹತ್ತಿರವಿರುತ್ತ ಕೈಲಾದ ಮಟ್ಟಿಗೆ ಅವರಿಗೆ ಸಂತೋಷವನ್ನುಂಟುಮಾಡಲು ಯತ್ನಿಸಿದರು.

ಕಲ್ಕತ್ತೆಯಿಂದ ಪೂರಿಗೆ ಹೋಗುವ ದಾರಿಯಲ್ಲಿ ಕಾಮಾರು ಪುಕರವಿತ್ತು. ಅನೇಕ ಯಾತ್ರಿಕರು ಅಲ್ಲಿ ತಂಗಿ ಹೋಗುತ್ತಿದ್ದರು. ಶ್ರೀರಾಮಕೃಷ್ಣರ ಮನೆ ಹತ್ತಿರವೇ ಅನೇಕ ಸಾಧುಸಂತರು ಇಳಿದುಕೊಳ್ಳುತ್ತಿದ್ದ ಛತ್ರವಿತ್ತು. ಶ್ರೀರಾಮಕೃಷ್ಣರು ಅಲ್ಲಿಗೆ ಪದೇ ಪದೇ

ಹೋಗುತ್ತಿದ್ದರು. ಸಾಧುಗಳೊಂದಿಗೆ ಮಾತನಾಡುವುದು, ಅವರು ಹೇಳುವುದನ್ನು ಭಕ್ತಿಯಿಂದ ಕೇಳುವುದು, ಅವರಿಗೆ ಸಣ್ಣಪುಟ್ಟ ಕೆಲಸದಲ್ಲಿ ನೆರವಾಗುವುದು, ಹೀಗೆ ಮಾಡುತ್ತಿದ್ದರು. ಒಂದು ದಿನ ಇವರಂತೆಯೇ ತಾನೂ ಸಾಧುವಾಗಬೇಕೆಂದು ಬಯಸಿ ಮೈಗೆ ಬೂದಿ ಬಳಿದುಕೊಂಡು ಬಟ್ಟೆಯನ್ನು ಬೈರಾಗಿಯಂತೆ ಉಟ್ಟುಕೊಂಡು ಮನೆಗೆ ಬಂದು ತಾಯಿ ಎದುರಿಗೆ ತಾನು ಸಾಧುವಾಗಿಬಿಟ್ಟೆ ಎಂದರು. ಇದನ್ನು ನೋಡಿ ತಾಯಿಗೆ ವ್ಯಥೆಯಾಯಿತು. ಗಂಡನ ಅಗಲಿಕೆಯನ್ನು, ಶ್ರೀರಾಮ ಕೃಷ್ಣರನ್ನು ನೋಡಿ ಮರೆತಿದ್ದರು. ಈಗ ಈ ಮಗುವೆ ಹೀಗೆ ಆಗುವೆ ನೆಂದು ಹೇಳಿದಾಗ ಎದೆ ತಲ್ಲಣಿಸಿತು. ಶ್ರೀರಾಮಕೃಷ್ಣರು ತಾಯಿ ದುಃಖಿತಳಾದುದನ್ನು ನೋಡಿ ತಮ್ಮ ಬೈರಾಗಿ ವೇಶವನ್ನು ತೆಗೆದು ಹಾಕಿದರು.

ಶ್ರೀರಾಮಕೃಷ್ಣರ ಮನೆ ಸಮೀಪದಲ್ಲಿ ಸೀತಾನಾಥಪೈನಿ ಎಂಬ ಗೃಹಸ್ಥ ಭಕ್ತನಿದ್ದನು. ಆತನ ಮನೆಯಲ್ಲಿ ಹಲವಾರು ಹೆಣ್ಣು ಮಕ್ಕಳು ಇದ್ದರು. ರಾಮಕೃಷ್ಣರು ಅವರ ಮನೆಗೆ ಹೋಗಿ ಅನೇಕ ವೇಳೆ ಹಾಡು ಕಥೆ ಮುಂತಾದುವನ್ನು ಹೇಳಿ ಸಂತೋಷಪಡಿಸುತ್ತಿದ್ದರು. ಆ ಮನೆ ಯವರು ಈ ಮಗುವಿನ ಹಾಡು ಮತ್ತು ನಟನೆಗೆ ಮೆಚ್ಚಿ ಕೃಷ್ಣನ ವೇಶಕ್ಕೆ ಬೇಕಾಗುವ ಬಟ್ಟೆಬರೆಯನ್ನು ಹೊಲಿಸಿ ಒಂದು ಚಿನ್ನದ ಕೊಳ ಲನ್ನು ಇವರಿಗೆ ಕೊಟ್ಟರಂತೆ.

ಇವರ ಮನೆ ಪಕ್ಕದಲ್ಲಿ ದುರ್ಗಾದಾಸಪೈನಿ ಎಂಬ ಮತ್ತೊಬ್ಬ ನಿದ್ದನು. ಅವರ ಮನೆಯವರು ಇನ್ನೂ ಘೋಷಾ ಪದ್ಧತಿಯನ್ನು ಬಿಟ್ಟಿರಲಿಲ್ಲ. ಆತನು ಇದಕ್ಕೆ ಹೆಮ್ಮೆಪಡುತ್ತಿದ್ದನು. ತನ್ನ ಮನೆ ಹೆಂಗಸರನ್ನು ಪರಪುರುಷರಾರೂ ನೋಡಿಲ್ಲ; ಅವರು ನೋಡುವುದಕ್ಕೆ ಆಗುವುದಿಲ್ಲ ಎಂದನು. ರಾಮಕೃಷ್ಣರು ಇದನ್ನು ಕೇಳಿ "ಮುಸುಕಲ್ಲ ಹೆಂಗಸರ ಮಾನ ಕಾಪಾಡುವುದು. ವಿದ್ಯೆ ಮತ್ತು ಒಳ್ಳೆ ನಡತೆ. ಬೇಕಾದರೆ ನಾನು ನಿಮ್ಮ ಮನೆಗೆ ಪ್ರವೇಶಿಸಬಲ್ಲೆ" ಎಂದರು. ಇದನ್ನು ಕೇಳಿ ದುರ್ಗಾದಾಸನು "ನೋಡೋಣ ಹೇಗೆ ಮಾಡುವೆಯೊ" ಎಂದನು.

ಒಂದು ದಿನ ಸಂಜೆ ದುರ್ಗಾದಾಸನು ಕೆಲವರೊಂದಿಗೆ ಮಾತ ನಾಡುತ್ತ ಮನೆಯ ಜಗಲಿಯ ಮೇಲೆ ಕುಳಿತುಕೊಂಡಿದ್ದನು. ಒಬ್ಬ ಹುಡುಗಿ ಮುಸುಕಿನಲ್ಲಿ ಬಂದು, "ತಾನು ಹತ್ತಿರದ ಹಳ್ಳಿಯವಳು, ನೂಲನ್ನು ಮಾರುವುದಕ್ಕೆ ಬಂದೆ; ಸಂಜೆಯಾಯಿತು ದೂರ ನಡೆದು ಹೋಗ ಬೇಕು; ರಾತ್ರಿ ಇಲ್ಲಿ ತಂಗಿ ಹೋಗುವುದಕ್ಕೆ ಅವಕಾಶವಿದೆಯೆ" ಎಂದು ಕೇಳಿದಳು. ದುರ್ಗಾದಾಸನು ಒಳಗೆ ಹೋಗಿ ಹೆಂಗಸರೊಡನೆ ಮಾತನಾಡು ಎಂದು ಕಳುಹಿಸಿದನು. ಹುಡುಗಿ ಒಳಗೆ ಹೋದ ಮೇಲೆ ದುರ್ಗಾದಾಸನ ಹೆಣ್ಣು ಮಕ್ಕಳು ಅಪರಿಚಿತ ಹುಡುಗಿಯನ್ನು ಆದರದಿಂದ ಬರಮಾಡಿಕೊಂಡು ತಿನ್ನುವುದಕ್ಕೆ ತಿಂಡಿ ಕೊಟ್ಟರು. ಅವರೊಡನೆ ಬಹಳ ಹೊತ್ತು ರಾತ್ರಿ ಮಾತನಾಡುತ್ತಿದ್ದರು. ಬೀದಿಯ ಹೊರಗಡೆ ಯಾರೋ ರಾಮಕೃಷ್ಣ ಎಂದು ಕೂಗುವಂತೆ ತೋರಿತು. ಈ ಸದ್ದು ಹುಡುಗಿಯ ಕಿವಿಗೆ ಬಿದ್ದೊಡನೆಯೇ "ಅಣ್ಣ ಬರುತ್ತೀನಿ" ಎಂದು ಕೂಗಿಕೊಂಡಳು. ಆಗ ಮನೆಯವರಿಗೆ ಗೊತ್ತಾಯಿತು. ಈ ಹುಡುಗಿ ರಾಮಕೃಷ್ಣನೇ ಎಂದು ಎಲ್ಲರಿಗೂ ಆಶ್ಚರ್ಯವಾಯಿತು. ದುರ್ಗಾದಾಸನಿಗೆ ಮೊದಲು ಕೋಪ ಬಂದರೂ ಮರೆತು ಈ ಹಾಸ್ಯದಲ್ಲಿ ಎಲ್ಲರೊಡನೆ ಭಾಗಿಯಾದನು.

ತಂದೆಯ ಕಾಲಾನಂತರ ಮನೆಯ ಜವಾಬ್ದಾರಿ ಶ್ರೀರಾಮಕೃಷ್ಣರ ಹಿರಿಯ ಅಣ್ಣ ರಾಮಕುಮಾರನ ಮೇಲೆ ಬಿದ್ದಿತು. ವಿಸ್ತಾರವಾಗು ತ್ತಿರುವ ಸಂಸಾರ ನಿರ್ವಹಣೆ ಹಳ್ಳಿಯಲ್ಲಿ ಬಹಳ ಕಷ್ಟವಾಯಿತು. ಈತ ನೇನೋ ದೊಡ್ಡ ವಿದ್ವಾಂಸನಾಗಿದ್ದನು. ಆದರೆ ಆ ಹಳ್ಳಿಯಲ್ಲಿ ವಿದ್ಯೆಗೆ ಗೌರವ ಸಿಕ್ಕೀತೆ ಹೊರತು ಹಣ ಸಿಕ್ಕುವಂತೆ ಇರಲಿಲ್ಲ. ಕಲ್ಕ ತ್ತೆಗೆ ಹೋಗಿ ಅಲ್ಲಿ ಒಂದು ಸಂಸ್ಕೃತ ಪಾಠಶಾಲೆಯನ್ನು ತೆರೆದನು. ಶ್ರೀರಾಮಕೃಷ್ಣರು ಆಗ ಕಾಮಾರಪುಕರದಲ್ಲೇ ಇದ್ದರು. ಆಗ ಅವರಿಗೆ ಸುಮಾರು ಹದಿನಾರು ವಯಸ್ಸು. ಹಳ್ಳಿಯಲ್ಲಿದ್ದರೆ ಹುಡುಗ ಓದುವುದಿಲ್ಲ ವೆಂದು ಕೆಲವು ದಿನಗಳಾದ ಮೇಲೆ ರಾಮಕುಮಾರನು ತನ್ನ ತಮ್ಮನನ್ನು ಕಲ್ಕತ್ತೆಗೆ ಕರೆಸಿಕೊಂಡನು. ತಾಯಿಯನ್ನು ಮೊದಲುಬಾರಿ ಬಿಟ್ಟು ಬಂದನು. ಕೆಲವುದಿನ ಹುಡುಗನನ್ನು ಹೋದ ದಾರಿಗೆ ಬಿಟ್ಟನು. ಹುಡುಗನಿಗೆ

ಓದಿನ ಕಡೆ ಮನಸ್ಸು ಓಡುತ್ತಿರಲಿಲ್ಲ. ಒಂದು ದಿನ ತಮ್ಮನನ್ನು ಕರೆದು, ನೀನು ಹೀಗೆ ಆದರೆ ಹೇಗೆ? ನಿನ್ನ ಭವಿಷ್ಯವೇನು? ಎಂದು ಕೇಳಿದನು. ಶ್ರೀರಾಮಕೃಷ್ಣರು "ನನಗೆ ಬಟ್ಟೆ, ಹಿಟ್ಟು ಕೊಡುವ ವಿದ್ಯೆ ಬೇಡ. ಯಾವುದು ನನ್ನ ಹೃದಯಕ್ಕೆ ಬೆಳಕನ್ನು ಕೊಡಬಲ್ಲದೋ, ಯಾವುದನ್ನು ತಿಳಿದರೆ ಮನಸ್ಸು ನಿತ್ಯ ತೃಪ್ತನಾಗುವನೋ, ಆ ವಿದ್ಯೆಯನ್ನು ಪಡೆಯಲು ನಾನು ಯತ್ನಿಸುವೆನು" ಎಂದರು. ಅಣ್ಣ ಅಪ್ರತಿಭನಾದನು. ತಮ್ಮ ಸುಲಭವಾಗಿ ದಾರಿಗೆ ಬರುವಂತೆ ಕಾಣಲಿಲ್ಲ. ತಾನು ಹೋಗುತ್ತಿದ್ದ ಕೆಲವು ಮನೆಗೆ ಪೂಜೆಗಾದರೂ ಹೋಗು ಎಂದು ಹೇಳಿದನು. ಇದಕ್ಕೆ ಬಹಳ ಸಂತೋಷದಿಂದ ಒಪ್ಪಿಕೊಂಡರು.

ಶ್ರೀರಾಮಕೃಷ್ಣರು ಇತರರ ಮನೆಗೆ ಹೋಗಿ ಪೂಜೆ ಮಾಡುವರು. ಮನೆಯವರಿಗೆ ಹೊಸ ಪೂಜಾರಿಯು ಪೂಜೆಮಾಡುವ ರೀತಿ, ಅವರ ಭಾವ, ಮುಂತಾದುವನ್ನು ನೋಡಿ ಹೆಚ್ಚು ಗೌರವ ಉಂಟಾಯಿತು. ಅವಸರ ಇಲ್ಲದೆ ಶ್ರದ್ಧಾಭಕ್ತಿಯಿಂದ ಪೂಜೆ ಮಾಡುತ್ತಿದ್ದರು. ಭಕ್ತಿಯಿಂದ ದೇವಿಗೆ ಹಾಡು ಹೇಳುತ್ತಿದ್ದರು. ಮನೆಯವರಿಗೂ ಇವರನ್ನು ಕಂಡು ಪ್ರೀತಿಯುಂಟಾಯಿತು. ಕೊಡುವ ದಕ್ಷಿಣೆ ದಾನದ ಆಸೆಗಲ್ಲದೆ ಕೇವಲ ಉಪಾಸನೆಗಾಗಿ ದೇವರನ್ನು ಇವರು ಪೂಜಿಸುತ್ತಿದ್ದರು,

ಕಲ್ಕತ್ತೆಯಲ್ಲಿ ರಾಣಿ ರಾಸಮಣಿ ಎಂಬ ದೊಡ್ಡ ದೈವಭಕ್ತಳಿದ್ದಳು. ಆಕೆ ತುಂಬಾ ಶ್ರೀಮಂತೆ. ಬೆಸ್ತರ ಕುಲದಿಂದ ಬಂದವಳು. ಬೇಕಾದಷ್ಟು ದುಡ್ಡು ಖರ್ಚುಮಾಡಿ ದಕ್ಷಿಣೇಶ್ವರ ಎಂಬಲ್ಲಿ ಗಂಗಾನದಿಯ ತೀರದಲ್ಲಿ ದೊಡ್ಡದೊಂದು ಕಾಳಿಕಾ ದೇವಾಲಯವನ್ನು ಕಟ್ಟಿಸಿದಳು. ಅದನ್ನು ಪ್ರತಿಷ್ಠೆಮಾಡುವ ದಿನ ಬಂದಿತು. ಆದರೆ ಅಲ್ಲಿ ಪೂಜೆಮಾಡಲು ಯಾವ ಪೂಜಾರಿಯೂ ಬರಲಿಲ್ಲ. ರಾಣಿ ಖಿನ್ನಳಾದಳು. ಈ ಸಮಾಚಾರ; ರಾಮಕುಮಾರನಿಗೆ ಗೊತ್ತಾಯಿತು. ಆತ ಈಕೆಗೆ ಒಂದು ಉಪಾಯ ವನ್ನು ಸೂಚಿಸಿದನು. "ಆ ದೇವಸ್ಥಾನವನ್ನು ಅದಕ್ಕೆ ಪ್ರತಿ ವರ್ಷವೂ ತಗಲುವ ಖರ್ಚಿನ ಸಮೇತ ಒಬ್ಬ ಬ್ರಾಹ್ಮಣನಿಗೆ ದಾನ ಮಾಡಿಬಿಟ್ಟರೆ ಆ ದೇವಸ್ಥಾನದಲ್ಲಿ ಯಾವ ಬ್ರಾಹ್ಮಣ ಪೂಜಾರಿ ಬೇಕಾದರೂ ಪೂಜೆ

ಮಾಡಬಹುದು" ಎಂದನು. ಹಾಗೆ ಮಾಡಿದರೂ ಯಾರೂ ಮುಂದಕ್ಕೆ ಬರಲಿಲ್ಲ. ಕೊನೆಗೆ ಉಪಾಯ ಹೇಳಿ ಕೊಟ್ಟವನೇ ಮುಂದೆ ಬರಬೇಕಾಯಿತು. ರಾಮಕುಮಾರನೆ ಅಲ್ಲಿ ಪೂಜೆ ಮಾಡುವುದಕ್ಕೆ ಒಪ್ಪಿಕೊಂಡನು. ಜೊತೆಗೆ ರಾಮಕೃಷ್ಣರೂ ಬಂದರು. ಕೆಲವು ವೇಳೆ ತಮ್ಮ ಅಣ್ಣನ ಪೂಜೆಗೆ ಅಣಿ ಮಾಡಿಕೊಡುತ್ತಿದ್ದರು.

ರಾಣಿ ರಾಸಮಣಿ ಹಿರಿಯ ಅಳಿಯ ಮಥುರನಾಥ ಬಿಸ್ವಾಸ್ ಎಂಬುವನಿದ್ದನು. ವಿದ್ಯಾವಂತ. ಮೇಲ್ವಿಚಾರಣೆ ನೋಡಿಕೊಳ್ಳುವುದರಲ್ಲಿ ತುಂಬಾ ನಿಪುಣ. ರಾಣಿಯ ಆಸ್ತಿಯನ್ನೆಲ್ಲ ಅವನೇ ನೋಡಿಕೊಳ್ಳುತ್ತಿದ್ದನು. ಹಲವು ವೇಳೆ ಆತ ಗುಡಿಗೆ ಬಂದಾಗ ರಾಮಕೃಷ್ಣರು ಕಣ್ಣಿಗೆ ಬೀಳುತ್ತಿದ್ದರು. ಆ ಹುಡುಗನ ಮೇಲೆ ಪ್ರೀತಿ ನೋಡಿದೊಡನೆಯೆ ಮಥುರನಾಥನಲ್ಲಿ ಹುಟ್ಟಿತು. ಹೇಗಾದರೂ ಮಾಡಿ ಆ ಹುಡುಗನನ್ನು ಗುಡಿಯಲ್ಲೇ ನಿಲ್ಲಿಸಬೇಕು; ಆತ ಪೂಜಾರಿಯಾದರೆ ಒಳ್ಳೆಯದಾದೀತು ಎಂದು ಭಾವಿಸಿ ವಿಚಾರಿಸಿದನು. ಆದರೆ ರಾಮಕೃಷ್ಣರು ಅದಕ್ಕೆ ಒಪ್ಪಲಿಲ್ಲ.

ಕೆಲವು ಕಾಲವಾದ ಮೇಲೆ ರಾಮಕುಮಾರನು ತನ್ನ ಹಳ್ಳಿಗೆ ಹೋದನು. ಪುನಃ ಹಿಂತಿರುಗಿ ಬಂದು ದೇವಿಯ ಪೂಜೆಯನ್ನು ಮಾಡುವ ಸುಯೋಗ ಅವನಿಗೆ ಇರಲಿಲ್ಲ. ಅಲ್ಲಿಯೇ ಕಾಲವಾದನು. ಆ ಸಮಯಕ್ಕೆ ಸರಿಯಾಗಿ ಹೃದಯರಾಮನೆಂಬ ರಾಮಕೃಷ್ಣರ ನೆಂಟನೊಬ್ಬನು ದಕ್ಷಿಣೇಶ್ವರಕ್ಕೆ ಜೀವನೋಪಾಯಕ್ಕೆ ಬಂದನು. ವಯಸ್ಸಿನಲ್ಲಿ ಶ್ರೀರಾಮಕೃಷ್ಣರಿಗಿಂತ ಕೆಲವು ವರುಷ ಕಿರಿಯವನು. ಆತನು ಶ್ರೀರಾಮಕೃಷ್ಣರೊಡನೆ ಜೀವಿಸತೊಡಗಿದನು. ಪುನಃ ಮಥುರನಾಥನು ಶ್ರೀರಾಮಕೃಷ್ಣರನ್ನು ಕೇಳಿಕೊಂಡನು. ಶ್ರೀರಾಮಕೃಷ್ಣರು, ದೇವಿಗೆ ಬೇಕಾದಷ್ಟು ಒಡವೆ ವಸ್ತ್ರಗಳನ್ನೆಲ್ಲ ಹಾಕಿರುವರು; ಅದು ಹೋದರೆ ಪೂಜಾರಿ ತಲೆಯಮೇಲೆ ಬರುವುದು. ತುಂಬಾ ಜವಾಬ್ದಾರಿ ಕೆಲಸ ಬೇಡ, ಎಂದರು. ಹೃದಯನು ತಾನು ಆ ಜವಾಬ್ದಾರಿ ಕೆಲಸವನ್ನು ನೋಡಿ ಕೊಳ್ಳುತ್ತೇನೆ. ರಾಮಕೃಷ್ಣರು ಪೂಜೆ ಮಾಡಿದರೆ ಸಾಕು, ಎಂದನು. ಶ್ರೀರಾಮಕೃಷ್ಣರು ಪೂಜೆ ಮಾಡುವುದಕ್ಕೆ ಒಪ್ಪಿಕೊಂಡರು.

ಶ್ರೀರಾಮಕೃಷ್ಣರ ಜೀವನದಲ್ಲಿ ಮಥುರನಾಥನು ಅತಿ ಮುಖ್ಯ ವಾದ ಪಾತ್ರವನ್ನು ಪಡೆದನು. ಶ್ರೀರಾಮಕೃಷ್ಣರಿಗೆ ಸಾಧನೆ ಸಮಯ ದಲ್ಲಿ ಬೇಕಾಗುವ ಸೌಕರ್ಯಗಳನ್ನೆಲ್ಲಾ ಒದಗಿಸಿದನು. ಅತಿ ಪ್ರೀತಿ ಯಿಂದ ರಾಮಕೃಷ್ಣರನ್ನು ಕಾಣುತ್ತಿದ್ದನು. ತನ್ನ ಇಷ್ಟದೈವವೇ ಶ್ರೀರಾಮಕೃಷ್ಣರಂತೆ ಇದೆ ಎಂದು ಭಾವಿಸಿದನು.

ದಕ್ಷಿಣೇಶ್ವರ ಸನ್ನಿವೇಶ ಶ್ರೀರಾಮಕೃಷ್ಣರ ಜೀವನಕ್ಕೆ ಅತಿ ಮುಖ್ಯವಾದ ಹಿನ್ನೆಲೆಯಾಯಿತು. ಪೂಜೆ ಮಾಡುವುದಕ್ಕೆ ಪ್ರಾರಂಭಿಸಿ ದುದು ಇಲ್ಲಿ. ಅದ್ಭುತ ಸಾಧನೆ ಮಾಡಿದುದು ಇಲ್ಲಿ. ಮಹಾ ವ್ಯಕ್ತಿ ಗಳು ಇವರನ್ನು ಸಂದರ್ಶಿಸಲು ಇಲ್ಲಿಗೇ ಬಂದರು. ಸ್ವಾಮಿ ವಿವೇಕಾ ನಂದರಂತಹ ಶಿಷ್ಯರನ್ನು ತರಪೇತು ಮಾಡಿದುದು ಇಲ್ಲಿ. ಶ್ರೀರಾಮಕೃಷ್ಣರ ಲೀಲಾ ನಾಟಕಕ್ಕೆ ದಕ್ಷಿಣೇಶ್ವರ ಒಂದು ರಂಗಭೂಮಿಯಾಯಿತು. ಪಾವನ ಗಂಗಾನದಿ ಮುಂದೆ ಹರಿಯುತ್ತಿದೆ. ನದಿಯಿಂದ ಬಂದೊಡ ನೆಯೆ ದೊಡ್ಡ ಸೋಪಾನ ಪಂಕ್ತಿ. ನಂತರ ಎಡಗಡೆ ಬಲಗಡೆ ಆರು ಆರು ಶಿವ ಮಂದಿರಗಳು, ಅದನ್ನು ದಾಟಿ ಹೋದರೆ ಭವ್ಯವಾದ ಕಾಳಿಕಾ ದೇವಸ್ಥಾನ, ಅದರ ಮುಂದುಗಡೆ ವಿಶಾಲವಾದ ನಾಟ್ಯಮಂದಿರ, ಮತ್ತೊಂದು ಕಡೆ ರಾಧಾಕೃಷ್ಣರ ದೇವಸ್ಥಾನ. ಸುತ್ತಲೂ ವಿಸ್ತಾರ ವಾದ ಅಂಗಳ, ಅದರ ಹಿಂದೆ ಪ್ರಾಕಾರದ ಸುತ್ತಲೂ ಯಾತ್ರಿಕರು ಬಂದರೆ ತಂಗಿ ಹೋಗುವುದಕ್ಕೆ ಹಲವಾರು ಕೋಣೆಗಳು ಇವೆ. ಪ್ರಾಕಾರ ವನ್ನು ದಾಟಿದೊಡನೆ ಗಂಗಾನದಿಯ ತೀರದಲ್ಲಿ ಅತಿ ದಟ್ಟವಾದ ಕಾಡು. ನಿರ್ಜನ ಪ್ರದೇಶ. ಹೊಸ ಹೊಸ ಆಧ್ಯಾತ್ಮಿಕ ಸಾಧನೆಯನ್ನು ಮಾಡು ವುದಕ್ಕೆ ಯೋಗ್ಯವಾದ ಸ್ಥಳ. ಪರಮಹಂಸರು ಈ ಪಾವನ ಪ್ರದೇಶವನ್ನು ತಮ್ಮ ತಪಸ್ಸಿನಿಂದ ಪಾವನತರ ಮಾಡಿದರು.

ಶ್ರೀರಾಮಕೃಷ್ಣರು ಪೂಜಾ ಕಾರ್ಯಕ್ಕೆ ಆರಂಭಿಸಿದರು. ಬೆಳಗ್ಗೆ ಭಕ್ತಿಯಿಂದ ಕಂಪಿಸುತ್ತ ಹೋಗುವರು. ದೇವಿಗೆ ಅಲಂಕಾರ ಮಾಡು ವರು. ಪೂಜೆ ಮಾಡುವರು. ನೈವೇದ್ಯ ಮಾಡುವರು. ಆದರೆ ಇದರಲ್ಲೇ ಶ್ರೀರಾಮಕೃಷ್ಣರ ಜೀವನ ಕೊನೆಗೊಂಡಿದ್ದರೆ ಒಬ್ಬ ಪೂಜಾರಿ ಮಾತ್ರ

ಸಿಕ್ಕುತ್ತಿದ್ದನು. ಜಗದ್ವಂದ್ಯ ಶ್ರೀರಾಮಕೃಷ್ಣರು ಸಿಕ್ಕುತ್ತಿರಲಿಲ್ಲ. ಶಿಲಾಮೂರ್ತಿಯಲ್ಲಿ ಚೇತನವಿದೆಯೆ? ಆಕೆ ಶಿಲ್ಪಿಗಳು ಕೊರೆದ ವಿಗ್ರಹವೊ ಅಥವಾ ಭಕ್ತರು ಕಂಡದರ್ಶನವೋ? ಆಕೆ ಕೇವಲ ಒಂದು ಕಲ್ಪನೆಯ ಕಂತೆಯೋ ಅಥವಾ ಭಕ್ತರ ಮೊರೆಯನ್ನು ಕೇಳಿ ಅವರನ್ನು ಸದಾ ಉದ್ಧಾರ ಮಾಡಲು ಕಾದು ಕುಳಿತಿರುವ ಮಹಾ ಶಕ್ತಿ, ಚಿಲುಮೆಯೊ? ಇದರ ಸತ್ಯವನ್ನು ಪರೀಕ್ಷಿಸುವುದಕ್ಕಾಗಿ ತಮ್ಮ ಜೀವನವನ್ನೆ ಒರೆಗಲ್ಲಾಗಿ ಮಾಡಿದರು.

ಎಲ್ಲ ಜನರಿಂದ ದೂರವಾದರು. ಅವರದೇ ಪ್ರಪಂಚದಲ್ಲಿ ವಿಹರಿಸ ತೊಡಗಿದರು. ಜಗನ್ಮಾತೆಯನ್ನು ನೋಡಬೇಕೆಂಬ ಕಾಡುಗಿಚ್ಚೊಂದು ಅವರ ಜೀವನವನ್ನೆಲ್ಲ ವ್ಯಾಪಿಸಿತು. ಹಗಲು ಪೂಜೆ ಮಾಡುವರು. ರಾತ್ರಿ ಹತ್ತಿರವಿರುವ ದಟ್ಟ ಅಡವಿಗೆ ಹೋಗಿ ಧ್ಯಾನಮಾಡುವರು. ಕಂಬನಿದುಂಬಿ ಜಗನ್ಮಾತೆಗಾಗಿ ಅಳುವರು. "ಹೇ ಜಗನ್ಮಾತೆ! ನೀನು ಎಲ್ಲಿರುವೆ, ಮೈದೋರು. ರಾಮಪ್ರಸಾದ ನಿನ್ನ ದರ್ಶನ ಪಡೆದು ಅನುಗ್ರಹೀತನಾದ. ನಾನೇನು ಪಾಪಿಯೆ! ನನ್ನ ಬಳಿಗೆ ನೀನೇಕೆ ಬಾರೆ? ನನಗೆ ಸುಖ ಬೇಡ, ಐಶ್ವರ್ಯ ಬೇಡ, ಸ್ನೇಹಿತರು ಬೇಡ, ಯಾವ ಪ್ರಪಂಚದ ಭೋಗವೂ ಬೇಡ. ಹೇ ತಾಯೆ ನಿನ್ನನ್ನು ನೋಡಬೇಕಾದುದೊಂದೆ ನನ್ನ ಚರಮಗುರಿ," ಎಂದು ಅಳುವರು. ದಿನದ ಅಂತ್ಯ ಸಮಯವನ್ನು ಸೂಚಿಸುವ ಘಂಟಾ ಧ್ವನಿಯನ್ನು ಕೇಳಿದೊಡನೆಯೆ ಹೃದಯವೇಗದಿಂದ ಅಳತೊಡಗುವರು: "ತಾಯಿ ಮತ್ತೊಂದುದಿನ ವ್ಯರ್ಥವಾಯಿತು. ನಾನು ಇನ್ನೂ ನಿನ್ನನ್ನು ಸಂದರ್ಶಿಸಲಿಲ್ಲ. ಈ ಅಲ್ಪ ಜೀವನದಲ್ಲಿ ಆಗಲೇ ಒಂದು ದಿನ ಕಳೆಯಿತು. ನನಗೆ ಇನ್ನೂ ಸತ್ಯ ಸಾಕ್ಷಾತ್ಕಾರವಾಗ ಲಿಲ್ಲ."

ಬೇಕಾದಷ್ಟು ಅತ್ತರು, ಪ್ರಾರ್ಥಿಸಿದರು, ಧ್ಯಾನ ಮಾಡಿದರು. ಆದರೂ ದೇವಿ ಮೈದೋರಲಿಲ್ಲ. ಒಂದು ದಿನ ಗರ್ಭಗುಡಿಯೊಳಗೆ ಇರುವಾಗ, ದೇವಿ ದರ್ಶನ ಪಡೆಯದ ಬಾಳು ನಿರರ್ಥಕ. ಇದು ಕೊನೆಗಾಣಲಿ, ಎಂದು ಬಲಿ ಕೊಡುವ ಕತ್ತಿಯನ್ನು ತೆಗೆದುಕೊಂಡು ತಮ್ಮ ರುಂಡವನ್ನು

ದೇವಿ ಅಡಿದಾವರೆಯಲ್ಲಿ ಚಂಡಾಡುವುದರಲ್ಲಿದ್ದರು. ಆಗ ಮಾಯಾ ತೆರೆ ಹಿಂದೆ ಸರಿಯಿತು. ಜಗನ್ಮಾತೆ ಪ್ರತ್ಯಕ್ಷಳಾದಳು. ಸಚ್ಚಿದಾನಂದ ಸ್ವರೂಪಿಣಿಯಲ್ಲಿ ಅವರ ಮನಸ್ಸು ತಲ್ಲೀನವಾಯಿತು. ಬಾಹ್ಯ ಪ್ರಪಂಚಕ್ಕೆ ಬಂದ ಮೇಲೆ ಅವರ ನಡತೆ ಸಂಪೂರ್ಣ ಬದಲಾಯಿಸಿತು. ಅವರ ಪಾಲಿಗೆ ಕಲ್ಲಿನ ವಿಗ್ರಹ ಮಾಯವಾಗಿ, ಅದೊಂದು ಸಚೇತನ ಮೂರ್ತಿಯಾಯಿತು. ಅಂದಿನಿಂದ ಪೂಜಾ ವಿಧಾನವೇ ಬೇರೆ ರೂಪ ತಾಳಿತು. ದೇವಿ ಅವರು ಕೊಟ್ಟ ನೈವೇದ್ಯವನ್ನು ಊಟ ಮಾಡುತ್ತಿದ್ದಳು, ಮಾಡಿದ ಪೂಜೆಯನ್ನು ಸ್ವೀಕರಿಸುತ್ತಿದ್ದಳು. ಬೇಡಿದ ಪ್ರಾರ್ಥನೆಯನ್ನು ಈಡೇರಿಸುತ್ತಿದ್ದಳು. ಮಗು ತಾಯಿಯೊಂದಿಗೆ ಯಾವ ಸಲಿಗೆಯಲ್ಲಿ ಇರುವುದೋ ಅದೇ ಸಲಿಗೆಯಲ್ಲಿ ಇವರು ಜಗನ್ಮಾತೆಯೊಡನೆ ವರ್ತಿಸುತ್ತಿದ್ದರು.

ಜಗನ್ಮಾತೆ ಪ್ರತ್ಯಕ್ಷಳಾದನಂತರ ಶ್ರೀರಾಮಕೃಷ್ಣರ ಪೂಜಾ ವಿಧಾನ ಬೇರೆ ರೂಪಕ್ಕೆ ತಿರುಗಿತು. ನೈವೇದ್ಯಕ್ಕೆ ಕೊಟ್ಟರೆ ಕೆಲವು ವೇಳೆ ತಾವು ಮೊದಲು ರುಚಿ ನೋಡುವರು, ನಂತರ ದೇವಿಗೆ ಅರ್ಪಣೆ ಮಾಡುತ್ತಿದ್ದರು. ಹೂವು, ಗಂಧ, ದೇವಿಗೆ ಅರ್ಪಣೆ ಮಾಡುವುದಕ್ಕೆ ಮುಂಚೆ, ಜಗನ್ಮಾತೆ ತಮ್ಮಲ್ಲಿಯೂ ಇರುವಂತೆ ಭಾಸವಾಗಿ ಅದನ್ನು ತಾವೇ ಅಲಂಕರಿಸಿಕೊಳ್ಳುತ್ತಿದ್ದರು. ಮಂಗಳಾರತಿಯ ಸಮಯದಲ್ಲಿ ಕೆಲವು ವೇಳೆ ಬಹಳ ಹೊತ್ತು, ಕೆಲವು ವೇಳೆ ಬಹಳ ಬೇಗ ಪೂರೈಸುವರು.

ಸಾಧಾರಣ ಜನರು ಹುಚ್ಚು ಪೂಜಾರಿಯೆಂದು ಇವರನ್ನು ಕರೆಯ ತೊಡಗಿದರು. ಸಾಧಾರಣವಾಗಿ ಮನುಷ್ಯರು ಮತ್ತೊಬ್ಬರನ್ನು ಅಳೆಯುವ ರೀತಿಯೆ ಹೀಗೆ. ಯಾರು ತಮ್ಮಂತೆ ಇಲ್ಲವೊ ಅವರೆಲ್ಲ ಹುಚ್ಚರು ತಮಗೆ ಮಾತ್ರ ಬುದ್ಧಿ ಸ್ಥಿಮಿತವಾಗಿರುವುದೆಂದು ಭಾವಿಸುವರು.

ದೇವಸ್ಥಾನದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಮಥುರ ನಾಥನಿಗೂ ಈ ಸುದ್ದಿ ತಿಳಿಯಿತು. ಆತನಿಗೆ ಮೊದಲಿನಿಂದಲೂ ಶ್ರೀರಾಮಕೃಷ್ಣರ ಮೇಲೆ ಗೌರವ. ಇದನ್ನು ಕೇಳಿ ಅತಿ ವ್ಯಾಕುಲನಾಗಿ

ತಾನೆ ಬಂದು ಇದನ್ನು ನೋಡುವವರೆವಿಗೂ, ಯಾರೂ ಇವರಿಗೆ ತೊಂದರೆ ಯನ್ನು ಕೊಡಕೂಡದೆಂದು ಹೇಳಿ ಕಳುಹಿಸಿದನು. ಒಂದು ದಿನ ಅವನೇ ಬಂದು ಇವರ ಪೂಜಾ ವಿಧಾನವನ್ನು ನೋಡಿ, ಇದು ಹುಚ್ಚಲ್ಲ, ದೇವೋನ್ಮಾದವೆಂದು ತಿಳಿದು ಯಾರೂ ಅವರಿಗೆ ತೊಂದರೆ ಕೊಡದಂತೆ ಎಚ್ಚರಿಸಿ ಹೋದನು.

ಒಂದು ದಿನ ರಾಣಿ ರಾಸಮಣಿ ಶ್ರೀ ರಾಮಕೃಷ್ಣರು ಪೂಜೆ ಮಾಡುತ್ತಿದ್ದಾಗ ಬಂದರು. ಪೂಜೆಯಾದಮೇಲೆ ರಾಮಕೃಷ್ಣರನ್ನು ಒಂದೆರಡು ಭಕ್ತಿಯ ಹಾಡನ್ನು ಹೇಳುವಂತೆ ಕೇಳಿಕೊಂಡರು. ರಾಮ ಕೃಷ್ಣರು ಹೇಳುತ್ತಿರುವಾಗ ಆಕೆಯ ಮನಸ್ಸು ಹಾಡಿನಮೇಲೆ ಇರಲಿಲ್ಲ ನ್ಯಾಯಾಸ್ಥಾನದಲ್ಲಿ ಬರಲಿರುವ ಒಂದು ವ್ಯಾಜ್ಯದಮೇಲೆ ಇತ್ತು. ಶ್ರೀರಾಮಕೃಷ್ಣರು ಇದನ್ನು ಗ್ರಹಿಸಿ ಆಕೆಯ ಹತ್ತಿರ ಹೋಗಿ ಇಲ್ಲಿಯೂ ಪ್ರಾಪಂಚಿಕ ಚಿಂತನೆಯೆ? ಎಂದು ಏಟುಕೊಟ್ಟರು. ರಾಣಿ ರಾಸಮಣಿ ತನ್ನ ತಪ್ಪನ್ನು ಒಪ್ಪಿಕೊಂಡು ಕುಪಿತಳಾಗದೆ, ಜಗನ್ಮಾತೆಯೆ ತನಗೆ ಈ ರೀತಿ ಶಿಕ್ಷಿಸಿದಳೆಂದು ಭಾವಿಸಿದಳು. ಇಂತಹ ಕೆಲವು ದೃಶ್ಯಗಳನ್ನು ಕಂಡ ಇತರರು ಶ್ರೀರಾಮಕೃಷ್ಣರನ್ನು ಹುಚ್ಚರೆಂದು ಕರೆದರು. ಆದರೆ ರಾಣಿಗೆ ಇವರೊಬ್ಬ ಮಹಾಭಕ್ತರೆಂದು ಗೊತ್ತಾಯಿತು. ವಜ್ರ ವ್ಯಾಪಾರಿಗೆ ಮಾತ್ರ ವಜ್ರ ಯಾವುದು ಗಾಜಿನಚೂರು ಯಾವುದು ಎಂಬುದು ಗೊತ್ತಾಗುವುದು

ರಾಣಿ ರಾಸಮಣಿ, ಮಥುರನಾಥ ಇವರಿಬ್ಬರೂ ಶ್ರೀರಾಮಕೃಷ್ಣರ ಜೀವನದಲ್ಲಿ ಮುಖ್ಯ ಪಾತ್ರವನ್ನು ಪಡೆದಿರುವರು ಎಂಬುದನ್ನು ಆಗಲೇ ತಿಳಿಸಿರುವೆವು. ಅವರಿಗೂ ರಾಮಕೃಷ್ಣರಿಗೂ ಸಂಬಂಧಪಟ್ಟ ಒಂದೆರಡು ಘಟನೆಗಳಿಂದ ಪರಮಹಂಸರ ವ್ಯಕ್ತಿತ್ವ ಇನ್ನೂ ಹೆಚ್ಚು ಪ್ರಕಾಶಕ್ಕೆ ಬರುವುದನ್ನು ನೋಡುತ್ತೇವೆ. ಒಂದು ದಿನ ರಾಧಾಕೃಷ್ಣನ ದೇವ ಸ್ಥಾನದಲ್ಲಿ ರಾಧಾರಮಣನ ವಿಗ್ರಹದ ಕಾಲು ಪೂಜಾರಿಯ ಅಜಾಗರೂಕತೆ ಯಿಂದ ಮುರಿದು ಹೋಯಿತು. ಭಿನ್ನವಾದ ವಿಗ್ರಹವನ್ನು ಪೂಜಿಸುವುದು ಅಶಾಸ್ತ್ರೀಯವೆಂದು ಪಂಡಿತರು ಸಾರಿದರು. ಇಷ್ಟು ದಿನವೂ ಪೂಜಿಸು ತ್ತಿದ್ದ ಆ ವಿಗ್ರಹವನ್ನು ತೆಗೆದಿಡಲು ರಾಣಿಯ ಮನಸ್ಸು ಒಪ್ಪಲಿಲ್ಲ.

ವ್ಯಾಕುಲದಲ್ಲಿರುವಾಗ ಶ್ರೀರಾಮಕೃಷ್ಣರು ಹೀಗೆ ಹೇಳಿದರು. "ನಿನ್ನ ಅಳಿಯ ಮಥುರನಾಥನಿಗೆ ಕಾಲು ಮುರಿದುಹೋದರೆ ಅವನನ್ನು ನೀನು ಹೊರಗೆ ಕಳುಹಿಸಿ ಬೇರೆ ಅಳಿಯನನ್ನು ಬರಮಾಡಿಕೊಳ್ಳುವೆಯಾ? ಅದರಂತೆಯೇ ವಿಗ್ರಹಕ್ಕೆ ಕಾಲು ಮುರಿದಿದ್ದರೇನಂತೆ ಅದನ್ನು ಸರಿಮಾಡಿ ಉಪಯೋಗಿಸಬಹುದು" ಎಂದರು. ಯಾವ ಶಾಸ್ತ್ರವೂ ಬಗೆ ಹರಿಸದ ಒಂದು ಸಮಸ್ಯೆಯನ್ನು ಶ್ರೀರಾಮಕೃಷ್ಣರು ಪ್ರಪಂಚದಿಂದ ಆರಿಸಿಕೊಂಡ ಒಂದು ಉಪಮಾನದಲ್ಲಿ ಬಗೆಹರಿಸಿದರು.

ಶ್ರೀರಾಮಕೃಷ್ಣರು ಪೂಜೆಗೆ ಒಂದು ದಿನ ಹೂವನ್ನು ಕೊಯ್ಯಲು ಹೋದಾಗ ಆ ಹೂವುಗಳೆಲ್ಲಾ ಆಗಲೆ ವಿರಾಟ ಸ್ವರೂಪಿ ಭಗವಂತನಿಗೆ ಅರ್ಪಿತವಾದಂತೆ ಭಾಸವಾಯಿತು. ಪ್ರತಿಯೊಂದು ಹೂವಿನ ಗಿಡವೂ ಅವನ ಕೈಯಲ್ಲಿರುವ ತುರಾಯಿಯಂತೆ ಕಂಡಿತು. ಅಂದಿನಿಂದ ಬಾಹ್ಯ ಪೂಜೆ ಮಾಡುವುದನ್ನು ಬಿಟ್ಟರು. ಹೃದಯನೇ ಈ ಕೆಲಸವನ್ನು ಕೈಕೊಂಡನು.

ಮಥುರನಾಥನು ಒಂದು ದಿನ ಶ್ರೀರಾಮಕೃಷ್ಣರೊಡನೆ ಮಾತನಾಡುತ್ತಿದ್ದಾಗ ದೇವರೂ ಕೂಡ ನಿಯಮವನ್ನು ಮೀರಲಾರ ಎಂದನು. ಆಗ ಶ್ರೀರಾಮಕೃಷ್ಣರು ದೇವರಿಗೆ ಎಲ್ಲವೂ ಸಾಧ್ಯವೆಂದರು. ಮಥುರನಾಥನು ಹಾಗಾದರೆ ಬಿಳೀ ದಾಸವಾಳದ ಹೂವು ಬಿಡುವ ಗಿಡದಲ್ಲಿ ಕೆಂಪು ಬಿಡಬಲ್ಲದೆ? ಎಂದನು. ಶ್ರೀರಾಮಕೃಷ್ಣರು ಅವನ ಇಚ್ಛೆಯಾದರೆ ಬಿಡದೇ ಏನು? ಎಂದರು. ಮಾರನೆ ದಿನ ತೋಟದಲ್ಲಿ ಹೋಗುತ್ತಿದ್ದಾಗ ಬಿಳೀ ದಾಸವಾಳದ ಗಿಡದಲ್ಲಿ ಒಂದು ಅಪರೂಪವಾಗಿ ಕೆಂಪು ದಾಸವಾಳ ಬಿಟ್ಟಿರುವುದನ್ನು ನೋಡಿದರು. ಅದನ್ನು ಮಥುರನಾಥನಿಗೆ ತೋರಿಸಿ "ನೋಡು ದೇವರಿಗೆ ಯಾವುದು ಅಸಾಧ್ಯ" ವೆಂದರು. ಮಥುರನು "ಅಬ್ಬ ನಿಮ್ಮ ಹತ್ತಿರ ಮಾತನಾಡುವುದು ತುಂಬಾ ಕಷ್ಟ" ಎಂದು ತೆಪ್ಪಗಾದನು.

ಮತ್ತೊಂದು ದಿನ ದೇವಸ್ಥಾನಕ್ಕೆ ಕಳ್ಳರು ನುಗ್ಗಿ ವಿಗ್ರಹದ ಮೇಲಿದ್ದ ಒಡವೆಗಳನ್ನೆಲ್ಲಾ ಅಪಹರಿಸಿದರು. ಮಥುರನು ಇದನ್ನು ಕೇಳಿ ಅತಿ ವ್ಯಾಕುಲನಾಗಿ ಶ್ರೀರಾಮಕೃಷ್ಣರ ಹತ್ತಿರ ಬಂದು "ಏನು

ವರು ತನ್ನ ಮೇಲಿರುವ ಒಡವೆಗಳನ್ನು ಕೂಡ ಕಳ್ಳರಿಂದ ಕಾಪಾಡಿ
ಳ್ಳಲಾರದೆ ಹೋದನಲ್ಲ" ಎಂದನು. ಶ್ರೀ ರಾಮಕೃಷ್ಣರು ಇದನ್ನು
ಳಿ! ಓ "ಏನು ಮಾತನಾಡುವೆ. ನಿನಗೆ ಅದು ಒಡವೆ, ಬೆಲೆ ಬಾಳ
ಕ್ಕದ್ದು. ದೇವರಿಗೆ ಅದು ಮಣ್ಣಿಗೆ ಸಮಾನ. ದೇವರ ಮನೆ
ಾಗಿಲನ್ನು ಕುಬೇರ ಕಾಯುತ್ತಿರುವಾಗ ನಿನ್ನ ಒಂದೆರಡು ಒಡವೆ
ಂತ್ತಾರೊ ಹೊತ್ತುಕೊಂಡು ಹೋದರೆ ಅದನ್ನು ದೇವರು ಗಮನಿಸು
ನೆ" ಎಂದರು,

ಸಾಧಾರಣ ಮನುಷ್ಯರು ದೇವರ ಮಹಾತ್ಮೆಯನ್ನು ಅಳೆಯುವುದು
ೀಗೆ. ಆ ಒಡವೆ ತೆಗೆದುಕೊಂಡು ಹೋಗುವ ಸಮಯದಲ್ಲಿ ಕಳ್ಳನೇ
ಾದರೂ ರಕ್ತಕಾರಿ ಸತ್ತಿದ್ದರೆ ಪರವಾ ಇಲ್ಲ, ದೇವರಲ್ಲಿ ಏನು ಸತ್ಯವಿದೆ
ನ್ನುವರು. ಏನೂ ಆಗದೆ ಹೋದರೆ ಅಯ್ಯೋ ಮಹಾತ್ಮೆ ಏನು ಇದೆ
ನ್ನುವರು. ದೇವರಿಗೆ ಸತ್ಪುರುಷ ಹೇಗೆ ಒಬ್ಬಮಗನೋ ಹಾಗೆಯೇ
ಳ್ಳನೂ ಒಬ್ಬಮಗ, ಎಂಬ ಭಾವ ಬರಬೇಕಾದರೆ ಜೀವ ತುಂಬಾ
ುಂದುವರಿದಿರಬೇಕು.

ಶ್ರೀ ರಾಮಕೃಷ್ಣರು ಅಸಾಧಾರಣ ರೀತಿಯಲ್ಲಿ ವ್ಯವಹರಿಸುತ್ತ
ದ್ದುದು ಸಾಧಾರಣ ಜನರಿಗೆ ಗೊತ್ತಾಗಲಿಲ್ಲ. ಇವರು ಹುಚ್ಚರಾಗಿ
ೋಗಿರುವರು ಎಂಬ ಸುದ್ದಿ ಸುತ್ತಲೂ ಹಬ್ಬಿತು. ಇದು ಕಾಮಾರಪುಕು
ಕ್ಕೂ ಮುಟ್ಟಿತು. ಶ್ರೀರಾಮಕೃಷ್ಣರ ತಾಯಿ ಚಂದ್ರಮಣಿದೇವಿ
೮೫೯ ರಲ್ಲಿ ಮಗನನ್ನು ಕಾಮಾರಪುಕುರಕ್ಕೆ ಕರೆದುಕೊಂಡು ಬಂದರು.
ಷದೋಪಚಾರ, ಯಂತ್ರ ಮಂತ್ರಗಳೆಲ್ಲವನ್ನು ಮಾಡಿಸಿದರು. ಆದರೆ
ವರ ಹುಚ್ಚು ಮಾಯವಾಗುವ ರೀತಿ ಕಾಣಲಿಲ್ಲ. ಪರಮಹಂಸರೆ
ಂದುಸಲ ಹಾಸ್ಯವಾಗಿ ಬೇಕಾದರೆ ನನಗೆ ರೋಗವಿದ್ದರೆ ಗುಣಮಾಡಿ,
ದರೆ ದೇವರ ಹುಚ್ಚನ್ನು ಮಾತ್ರ ಬಿಡಿಸಬೇಡಿ ಎಂದರು. ಯಾರೊ
ಂದ್ರಮಣಿದೇವಿಗೆ, ಮಗನಿಗೆ ಮದುವೆ ಮಾಡಿದರೆ ಹುಚ್ಚು ಬಿಟ್ಟು
ೋಗುವುದೆಂದು ಹೇಳಿದರು. ಹೆಣ್ಣಿಗೆ ಬೇಕಾದಷ್ಟು ಹುಡುಕ
ಾಡಗಿದರು. ಸುಮಾರು ಮೂರು ಮೈಲಿ ದೂರದ ಜಯರಾಮವಟಿ

ಎಂಬ ಗ್ರಾಮದಲ್ಲಿ ರಾಮಚಂದ್ರ ಮುಖ್ಯೋಪಾಧ್ಯಾಯರ ಮನೆಯಲ್ಲಿ ಐದು ವರುಷದ ಒಂದು ಹೆಣ್ಣು ಮಗು ಸಿಕ್ಕಿತು. ಆಗ ಶ್ರೀರಾಮಕೃಷ್ಣರಿಗೆ ೨೩ ವಯಸ್ಸು. ವಧುವರರಿಗೆ ಅಂತರ ಹದಿನೆಂಟು ವರುಷ! ಅಂತೂ ಮದುವೆಯಾಯಿತು. ಈ ಮದುವೆಯ ಗುರಿ ಶ್ರೀರಾಮಕೃಷ್ಣರಿಗೆ ಹಿಡಿದ ದೇವರ ಹುಚ್ಚನ್ನು ಬಿಡಿಸುವುದು. ಆದರೆ ಇವರ ಭವಿಷ್ಯ ಜೀವನ, ಮದುವೆ ಮಾಡಿದ ಉದ್ದೇಶ ಸಫಲವಾಗಲಿಲ್ಲವೆಂಬುದಕ್ಕೆ ಉದಾಹರಣೆಯಾಗಿದೆ.

ಮದುವೆಯಾದ ಕೆಲವು ತಿಂಗಳ ಮೇಲೆ ಶ್ರೀರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹಿಂತಿರುಗಿದರು. ಆಧ್ಯಾತ್ಮಿಕ ಘಟನಾವಳಿಗಳ ಮಧ್ಯದಲ್ಲಿ ಅವರ ಜೀವನ ಸುಟ್ಟರೆಯ ಮಧ್ಯದಲ್ಲಿ ಸುತ್ತುತ್ತಿರುವ ತರಗೆಲೆಯಂತೆ ಆಯಿತು. ಧ್ಯಾನಕ್ಕೆ ಕುಳಿತರೆಂದರೆ ಶಿಲಾ ವಿಗ್ರಹದಂತೆ ಆಗುತ್ತಿದ್ದರು. ಇವರ ಅಚಲ ದೇಹವನ್ನು ನೋಡಿ ಹಕ್ಕಿಗಳು ನಿರ್ಭಯವಾಗಿ ಇವರ ದೇಹದ ಮೇಲೆ ಕುಳಿತುಕೊಳ್ಳುತ್ತಿದ್ದವು.

ಶ್ರೀರಾಮಕೃಷ್ಣರು ದೇವಿಯ ದರ್ಶನವನ್ನೇನೊ ಪಡೆದಿದ್ದರು. ಆದರೆ ಅದರಲ್ಲಿ ತೃಪ್ತರಾಗಲಿಲ್ಲ. ದೇವರನ್ನು ಎಷ್ಟೆಷ್ಟು ರೂಪಿನಲ್ಲಿ ನೋಡಲು ಸಾಧ್ಯವೋ ಅಷ್ಟು ರೂಪಿನಲ್ಲೆಲ್ಲಾ ನೋಡಲು ಬಯಸಿದರು ಹಲವು ಭಾವದ ಮೂಲಕ ಅವನನ್ನು ಪ್ರೀತಿಸಿದರು. ಹಲವು ಸಾಧನೆಯನ್ನು ಮಾಡಿದರು. ಹಲವು ಧರ್ಮವನ್ನು ಅನುಷ್ಠಾನ ಮಾಡಿದರು. ಹಲವು ಬೇರೆ ಬೇರೆ ದಾರಿಯಲ್ಲಿ ನಡೆದು ಒಂದೇ ಸತ್ಯದೆಡೆಗೆ ಬಂದರು. ಸತ್ಯದೇಗುಲಕ್ಕೆ ಬರುವುದಕ್ಕೆ ಅನಂತ ಬಾಗಿಲುಗಳಿವೆ ಎಂಬುದು ಅವರ ಅನುಭವದ ಆಳದಿಂದ ಬಂದ ಮಾತು. ಕೇವಲ ತರ್ಕದ ಗರಡಿಯಿಂದ ಬಂದುದಲ್ಲ. ಎಲ್ಲಾ ಧರ್ಮದಲ್ಲಿರುವ ಏಕಮಾತ್ರ ಸತ್ಯದ ಅನುಭವ ಇವರಿಗೆ ಕರಗತವಾದುದರಿಂದ ಇವರು ಯಾರನ್ನೂ ದೂರುತ್ತಿರಲಿಲ್ಲ. ಯಾವ ಧರ್ಮವನ್ನೂ ತಾತ್ಸಾರದಿಂದ ಕಾಣುತ್ತಿರಲಿಲ್ಲ.

ಶ್ರೀರಾಮಕೃಷ್ಣರ ಸಾಧನೆಯಲ್ಲಿ ಒಂದು ವೈಶಿಷ್ಟ್ಯವನ್ನು ನೋಡುತ್ತೇವೆ. ಇವರು ಗುರುಗಳನ್ನು ಹುಡುಕಿಕೊಂಡು ಹೋಗಬೇಕಾಗಿರಲಿಲ್ಲ.

ಗುರುಗಳು ಇವರೆಡೆಗೆ ಬಂದರು. ಒಂದೊಂದು ಸಾಧನೆಗೆ ಆಯಾ ಪಥ ದಲ್ಲಿ ನುರಿತ ಗುರುವೊಬ್ಬನು ಹೇಗೋ ಇವರ ಸಮೀಪಕ್ಕೆ ಆಕರ್ಷಿಸಲ್ಪಟ್ಟು ಇವರನ್ನು ಮುಂದಕ್ಕೆ ಕರೆದುಕೊಂಡು ಹೋಗುವರು. ಶಾಕ್ತ ಮತ್ತು ವೈಷ್ಣವ ಸಾಧನೆಗಳು ಭೈರವಿಬ್ರಾಹ್ಮಣಿ ಎಂಬ ಘನ ವಿದುಶಿಯ ನೇತೃತ್ವದಲ್ಲಿ ನಡೆಯಿತು. ಆಕೆ ಇಂತಹ ಸಾಧಕನೊಬ್ಬನು ಸಿಕ್ಕಿಯಾನೆ ಎಂದು ಹುಡುಕುತ್ತಿದ್ದಾಗ, ಶ್ರೀರಾಮಕೃಷ್ಣರು ಅವರಿಗೆ ಗೋಚರಿಸಿದರು. ವಾತ್ಸಲ್ಯ ಭಾವಕ್ಕೆ ರಾಮಲಾಲನೆಂಬ ಒಬ್ಬ ರಾಮಭಕ್ತನ ಪರಿಚಯ ವಾಯಿತು. ಅದ್ವೈತ ಸಾಧನೆಗೆ ತೋತಾಪುರಿ ಎಂಬ ಸಂನ್ಯಾಸಿಯ ಸಹಾಯ ದೊರಕಿತು. ಕ್ರೈಸ್ಥ ಮತ್ತು ಮಹಮ್ಮದೀಯ ಸಾಧನೆಗಳಿಗೆ ಆಯಾ ಮತದ ಅತ್ಯುತ್ತಮ ಪ್ರತಿನಿಧಿಗಳ ಸಹಾಯ ದೊರಕಿತು. ಘನ ವಿದ್ವಾಂಸರು ಅವರ ಸಮೀಪಕ್ಕೆ ಬಂದರು. ಅತಿ ಮುಂದುವರಿದ ಸಾಧಕರು ಅವರ ಸಮೀಪಕ್ಕೆ ಬಂದರು. ಎಲ್ಲರಿಂದಲೂ ಶ್ರೀರಾಮಕೃಷ್ಣರು ಕೆಲವು ವಿಷಯಗಳನ್ನು ಕಲಿತರು. "ನಾನು ಎಲ್ಲಿಯವರೆಗೂ ಬದುಕಿರು ವೆನೊ ಅಲ್ಲಿಯವರೆವಿಗೂ ಹೊಸದಾಗಿ ಕಲಿಯುತ್ತೇನೆ" ಎನ್ನುತ್ತಿದ್ದರು. ಈ ದೈನ್ಯವನ್ನು ಕೊನೆಯ ತನಕ ಶ್ರೀರಾಮಕೃಷ್ಣರಲ್ಲಿ ಕಾಣುತ್ತೇವೆ.

ಶ್ರೀರಾಮಕೃಷ್ಣರು ತಮ್ಮದೇ ಆದ ಸರಳ ರೀತಿಯಲ್ಲಿ ಭಗವಂತ ನಿಗೂ ಭಕ್ತನಿಗೂ ಮಧ್ಯೆ ಇರುವ ತೊಡರುಗಳನ್ನು ಭೇದಿಸಲು ಮೊದಲು ಮಾಡಿದರು. ದ್ರವ್ಯದ ಮೇಲಿರುವ ಆಸೆ ಸಂಪೂರ್ಣ ತೊಲಗುವಂತೆ ಒಂದು ಕೈಯಲ್ಲಿ ರೂಪಾಯಿಯನ್ನು ಮತ್ತೊಂದು ಕೈಯಲ್ಲಿ ಮಣ್ಣನ್ನು ತೆಗೆದುಕೊಂಡು ಗಂಗಾನದಿ ತೀರದ ಮೇಲೆ ಕುಳಿತು ಹಣವನ್ನು ನೋಡಿ, ಮತ್ತೊಂದು ಕೈಯ್ಯಲ್ಲಿರುವ ಮಣ್ಣಿಗಿಂತ ಇದು ಮೇಲಲ್ಲ; ಇದು ದೇವರ ಸಮೀಪಕ್ಕೆ ಕರೆದುಕೊಂಡು ಹೋಗುವುದಕ್ಕೆ ಬದಲಾಗಿ ಲೋಭ ಮಾರ್ಗದಲ್ಲಿ ಸಿಲುಕಿಸುವುದು; ಎಂದು ತರ್ಕಿಸಿ ಎರಡನ್ನೂ ನೀರಿಗೆ ಬಿಸಾಡುತ್ತಿದ್ದರು. ಇವರು ಯಾವುದನ್ನು ಧಿಕ್ಕರಿಸಿದ್ದರೋ ಅದನ್ನು ಇವರ ಇಡೀ ದೇಹದ ಅಂಗೋಪಾಂಗಾಗಳು ಧಿಕ್ಕರಿಸಿದ್ದುವು. ಮನಸ್ಸಿಗೆ ಅರಿವಾಗದೆ ದೇಹಕ್ಕೆ ಸೋಕಿದರೂ ಚೇಳು ಕುಟುಕಿದಂತೆ ಆಗಿ ಅದನ್ನು ಹತ್ತಿರಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲ.

ಇದರಂತೆ ಕಾಮಿನಿಯೂ ಕೂಡ. ಶ್ರೀರಾಮಕೃಷ್ಣರು ಹೆಂಗಸರನ್ನು ದೂರದೇ ಕಾಮದೃಷ್ಟಿಯಿಂದ ನೋಡುವುದನ್ನು ಬಿಟ್ಟರು. ಎಲ್ಲರಲ್ಲೂ ಜಗನ್ಮಾತೆಯೆ ಹಲವು ರೂಪಿನಿಂದ ಕಾಣುತ್ತಿರುವಳೆಂದು ಇಡೀ ಸ್ತ್ರೀ ಕುಲವನ್ನೇ ಪೂಜ್ಯ ದೃಷ್ಟಿಯಿಂದ ನೋಡುತ್ತಿದ್ದರು.

ಉಚ್ಚ ಬ್ರಾಹ್ಮಣ ಕುಲದಿಂದ ಬಂದವನು ತಾನೆಂಬ ಅಹಂಕಾರವನ್ನು ಅಳಿಸುವುದಕ್ಕಾಗಿ ಚಂಡಾಲನ ಮನೆಯನ್ನು ಕೂಡ ಇವರು ಗುಡಿಸಿದರು.

ಮಾನವನು ಯಾವ ಯಾವ ಭಾವದ ಮೂಲಕ ಮತ್ತೊಬ್ಬ ಮಾನವನನ್ನು ಪ್ರೀತಿಸಬಹುದೊ ಆ ಭಾವಗಳೆಲ್ಲದರ ಮೂಲಕ ದೇವರನ್ನು ಪ್ರೀತಿಸಬಹುದು. ಪ್ರೀತಿ, ಭಕ್ತ ಮತ್ತು ಭಗವಂತನನ್ನು ಬಂಧಿಸುವ ಒಂದು ಮಧುರ ಬಂಧನ. ಎಲ್ಲಿಯವರೆವಿಗೂ ನಾವು ದೇವರಿಗೆ ಆಕಾರ ಕೊಡುವೆವೊ, ಎಲ್ಲಿಯವರಿವಿಗೂ ಅವನು ಸಗುಣನಾಗಿರುವನೋ ಅಲ್ಲಿಯವರೆವಿಗೆ ಮಾನವ ಸಹಜ ಪ್ರೀತಿಯ ಮೂಲಕ ಮಾತ್ರ ದೇವರನ್ನು ಪ್ರೀತಿಸಬಲ್ಲೆವು. ಇಂತಹ ಪ್ರೀತಿಯಲ್ಲಿ ಐದು ಮುಖ್ಯ ಭಾಗಗಳಿವೆ. ಶಾಂತ ಭಾವ, ದೇವರನ್ನು ತಂದೆ ಅಥವಾ ತಾಯಿಯಂತೆ ಭಾವಿಸಬಹುದು. ಜೀವನದಲ್ಲಿ ಮಗುವಿಗೆ ತಂದೆ ತಾಯಿಗಳಷ್ಟು ಅಭಯವನ್ನು ಕೊಡುವವರು ಮತ್ತಾರೂ ದೊರಕಲಾರರು. ಅವರಲ್ಲಿರುವಷ್ಟು ಸಲಿಗೆ ಮತ್ತಾರಲ್ಲಿಯೂ ಇರಲಾರದು. ಇಡೀ ಬ್ರಹ್ಮಾಂಡ ಅವನಿಂದ ಬಂದಿದೆ; ನಮ್ಮನ್ನು ದುಃಖಸಂಕಟಗಳಿಂದ ಪಾರುಮಾಡುವ ಮಹಾ ಶಕ್ತಿ ಗಣಿಯಾಗಿರುವನು. ಆದಕಾರಣವೆ ಅವನನ್ನು ತಂದೆ ಅಥವಾ ತಾಯಿ ಎಂದು ಕರೆಯುವುದು. ಶ್ರೀರಾಮಕೃಷ್ಣರು ಮುಕ್ಕಾಲುಪಾಲು ತಮ್ಮ ಭಾವ ಜೀವನವನ್ನು ಕಳೆಯುತ್ತಿದುದು. ಜಗನ್ಮಾತೆಯನ್ನು ನೆಚ್ಚಿ ಕೊಂಡಿರುವ ಮಗುವಿನಂತೆ. ಆತನನ್ನು ಕೆಲವು ವೇಳೆ ತಂದೆಯೆಂತಲೂ ಕರೆದರು. ಹಲವಾರು ದೇವರ ಮೂಲಕವೂ ನೋಡಿದರು.

ದಾಸ್ಯಭಾವದಲ್ಲಿ ಭಗವಂತ ಸ್ವಾಮಿಯಾಗುವನು. ಭಕ್ತ ಅವನ ಆಣತಿಯನ್ನು ಪರಿಪಾಲಿಸುವ ಭೃತ್ಯನಾಗುವನು. ಭಕ್ತನಿಗೆ ತನಗಾಗಿ

ಏನನ್ನು ಸಾಧಿಸಬೇಂಬ ಆಸೆ ಇರುವುದಿಲ್ಲ. ಅವನಿಗೆ ಸ್ವಾಮಿಯ ಹಿತ, ತನ್ನ ಹಿತ; ಸ್ವಾಮಿಯು ಇಷ್ಟ ತನ್ನ ಇಷ್ಟ: ಸ್ವಾಮಿಯು ಜಯ ತನ್ನ ಜಯ. ಈ ಭೃತ್ಯಭಾವದಲ್ಲಿರಬೇಕಾದರೆ ಅಹಂಕಾರ ಸಂಪೂರ್ಣ ನಾಶ ವಾಗಿರಬೇಕು. ಆಗ ಮಾತ್ರ ಎಲ್ಲ ಭಗವಂತನಿಗೆ ಎಂಬ ಮಧುರಗಾನ ಪಲ್ಲವಿ ಅವನ ಜೀವನದಿಂದ ಹೊರಬರುವುದು. ಹನುಮಂತನು ಶ್ರೀ ರಾಮಚಂದ್ರನನ್ನು ನೋಡುತ್ತಿದ್ದುದು ಹೀಗೆ. ಹನುಮಂತನಿಗೆ ರಾಮ ಇಷ್ಟದೇವನಾಗುವನು. ಶ್ರೀ ರಾಮನ ಆಣತಿಯನ್ನು ಪರಿಪಾಲಿಸುವು ದೊಂದೆ ಇವನ ಜೀವನದ ಮಹೋದ್ದೇಶ. ಅದಕ್ಕಾಗಿ ತನ್ನ ಸರ್ವಸ್ವ ವನ್ನೂ ಧಾರೆ ಎರೆಯುವನು. ವೀರಾದಿವೀರನಾದರೂ ರಾಮಾಯಣದಲ್ಲಿ ಬರುವ ಹನುಮಂತ ನಿಗರ್ವಿ, ವಿನಯಶಾಲಿ. ಅಶೋಕ ವನದಲ್ಲಿ ದುಃಖ ದಿಂದ ಕೊರಗುತ್ತಿದ್ದ ಸೀತಾದೇವಿಯನ್ನು ನೋಡಲು ಹೋದಾಗ ಶ್ರೀ ರಾಮಚಂದ್ರನ ಸುದ್ದಿಯನ್ನು ಅವಳಿಗೆ ಹೇಳಿದನು. ಇನ್ನೇನು ಶ್ರೀ ರಾಮನು ಬೇಗ ಬರುವನು, ನಿನ್ನನ್ನು ಸೆರೆಯಿಂದ ಬಿಡಿಸುವನು ಎಂದು ಧೈರ್ಯ ಹೇಳಿದನು. ಆದರೆ ಸೀತೆಗೆ ರಾಮನ ಜೊತೆಯಲ್ಲಿ ಬರುವವರ ಸಾಹಸದಲ್ಲಿ ನಂಬಿಕೆ ಇರಲಿಲ್ಲ. ಆಕೆಗೆ, ಹನುಮಂತನು ಸುಗ್ರೀವನ ಸೈನ್ಯದಲ್ಲಿ ತಾನೆ ಕೊನೆಯವನೆಂದು ಹೇಳುತ್ತಾನೆ. ಯಾರು ವೀರಾದಿ ವೀರನೊ, ಜಗಜಟ್ಟಿಯೋ ಅಂತಹವನು ಹಾಗೆ ಹೇಳಿ ಕೊಳ್ಳಬೇಕಾದರೆ ಎಷ್ಟು ಅಹಂಕಾರದಿಂದ ಆ ವ್ಯಕ್ತಿ ಪಾರಾಗಿರುವನು ಎಂಬುದನ್ನು ಊಹಿಸಬಹುದು.

ಪರಮಹಂಸರು ದಾಸ್ಯಭಾವವನ್ನು ಹನುಮಂತನಂತೆ ಅಭ್ಯಾಸ ಮಾಡಿದರು. ಗೆಡ್ಡೆಗೆಣಸುಗಳನ್ನು ತಿಂದು, ಮರದ ಮೇಲೆ ನೆಗೆದಾಡು ತ್ತಿದ್ದರಂತೆ ಆ ಕಾಲದಲ್ಲಿ. ಶ್ರೀರಾಮ ಮತ್ತು ಸೀತಾದೇವಿಯ ದರ್ಶನ ವನ್ನು ಆ ಭಾವದಲ್ಲಿ ಇದ್ದಾಗ ಪಡೆದರು.

ಸಖ್ಯಭಾವದಲ್ಲಿ ಭಕ್ತನಿಗೆ ಭಗವಂತನಲ್ಲಿ ಒಂದು ನಿಕಟತೆ ಕಾಣು ವುದು. ದೊಡ್ಡವನು ಚಿಕ್ಕವನು ಎಂಬ ಭಾವ ಮಾಯವಾಗುವುದು. ಭಗವಂತನಲ್ಲಿರುವ ಶಕ್ತಿಗಾಗಿ ಸ್ನೇಹಿತ ಅವನನ್ನು ಪ್ರೀತಿಸುವುದಿಲ್ಲ.

ಕೇವಲ ಪ್ರೀತಿಗಾಗಿ ಪ್ರೀತಿಸುತ್ತಾನೆ. ಅನ್ಯೋನ್ಯ ಸಲಿಗೆ ಹೆಚ್ಚು ವುದು. ಕೃಷ್ಣಾರ್ಜುನರ ಸಂಬಂಧ ಸಖ್ಯಭಾವಕ್ಕೆ ಉದಾಹರಣೆ. ಶ್ರೀರಾಮಕೃಷ್ಣರು ಈ ಭಾವದಲ್ಲಿಯೂ ಕೆಲವು ಕಾಲ ತಲ್ಲೀನರಾಗಿದ್ದರು.

ವಾತ್ಸಲ್ಯಭಾವದಲ್ಲಿ ಭಕ್ತ, ಭಗವಂತನನ್ನು ತನ್ನ ಮಗುವೆಂದು ತಿಳಿಯುವನು. ತಾಯಿಗೆ ಮಗುವಿನ ಮೇಲೆ ಇರುವ ಪ್ರೀತಿಯಲ್ಲಿ ಸಂಪೂರ್ಣ ನಿಸ್ವಾರ್ಥತೆ ಕಾಣುವುದು. ಮಗುವಿನಿಂದ ತಾಯಿ ಏನನ್ನೂ ಅಪೇಕ್ಷಿಸುವುದಿಲ್ಲ. ಸದಾ ಮಗುವಿನ ಹಿತಕ್ಕೆ ತನ್ನ ನಿದ್ದೆ, ಸುಖ ಎಲ್ಲವನ್ನೂ ತೆರಲು ಸಿದ್ಧಳಾಗಿರುವಳು. ಎಲ್ಲಿಯವರೆವಿಗೂ ಲಾಭದ ಅಪೇಕ್ಷೆ ಸ್ವಲ್ಪವಾದರೂ ಇದೆಯೋ, ಅಲ್ಲಿಯವರಿವಿಗೆ, ಇಂತಹ ಪ್ರೇಮ ಸಾಧ್ಯವಿಲ್ಲ. ಯಶೋದೆ ಶ್ರೀ ಕೃಷ್ಣನನ್ನು ಪ್ರೀತಿಸಿದ ರೀತಿ ಇದು; ಕೌಸಲ್ಯೆ ರಾಮನನ್ನು ಪ್ರೀತಿಸಿದ ರೀತಿ ಇದು. ಶ್ರೀರಾಮಕೃಷ್ಣರು ಈ ಭಾವದಲ್ಲಿದ್ದಾಗ ದೇವರನ್ನು ರಾಮಲಾಲನೆಂದು ಪ್ರೀತಿಸಿದರು.

ಮಧುರ ಭಾವದಲ್ಲಿ ಭಕ್ತ ಭಗವಂತರಿಗೆ ಪ್ರೇಯಕ ಪ್ರೇಯಸಿ ಸಂಬಂಧವಿರುವುದು. ಮಾನವ ಪ್ರೇಮದಲ್ಲೆಲ್ಲ ಅತ್ಯಂತ ನಿಕಟವಾದುದು ಪ್ರೇಯಕ ಮತ್ತು ಪ್ರೇಯಸಿಯರದು. ಗೋಪಿಯರು ಶ್ರೀ ಕೃಷ್ಣನನ್ನು ಪ್ರೀತಿಸಿದ ರೀತಿ ಇದು. ಶ್ರೀರಾಮಕೃಷ್ಣರು ಈ ಭಾವದಲ್ಲಿರುವಾಗ ಹೆಂಗಸಿನಂತೆ ಸೀರೆತೊಟ್ಟು, ಆಭರಣವಿಟ್ಟುಕೊಂಡು ರಾಧಾರಮಣನನ್ನು ಸೇವಿಸಿದರು.

ಶ್ರೀರಾಮಕೃಷ್ಣರ ಭಾವ ಜೀವನ ಸರ್ವತೋಮುಖವಾದುದು. ಯಾವ ಯಾವ ಭಾವದ ಮೂಲಕ ಭಗವಂತನನ್ನು ನೋಡಬಹುದೊ ಅದರ ಮೂಲಕ ನೋಡಿದರು. ಒಂದೊಂದುಸಲ ಒಂದೊಂದು ಭಾವದಲ್ಲಿ ತಲ್ಲೀನರಾಗುತ್ತಿದ್ದರು.

ಸಗುಣೋಪಾಸನೆಯಲ್ಲಿ ಮಾತ್ರ ಭಾವಕ್ಕೆ ಅವಕಾಶವಿದೆ. ಆದರೆ ಸಗುಣವೆಂಬ ಅಲೆಗಳ ಹಿಂದೆ, ನಿರ್ಗುಣ ನಿರಾಕಾರದ ಕಡಲಿದೆ. ಶ್ರೀರಾಮ ಕೃಷ್ಣರು ತೋತಾಪುರಿ ಎಂಬ ಸಂನ್ಯಾಸಿಯಿಂದ ಅದ್ವೈತ ದೀಕ್ಷೆಯನ್ನು ಪಡೆದು, ನಾಮರೂಪಗಳನ್ನು ಮೀರಿ, ಕಾರ್ಯಕಾರಣ ಜಗತ್ತನ್ನು

ಅತಿಕ್ರಮಿಸಿ, ನಿರಾಕಾರ ಬ್ರಹ್ಮದ ಕಡಲಿಗೆ ಧುಮಿಕಿ ತಲ್ಲೀನರಾದರು. ಆ ಸ್ಥಿತಿಯಲ್ಲಿಯೇ ಅವರು ಬಹುಕಾಲವಿದ್ದರು. ಕ್ರಮೇಣ ಜಗನ್ಮಯಿ ಅವರ ಮನಸ್ಸನ್ನು ಕೆಳಗಿಳಿಸಿ ಸಾಕಾರ ನಿರಾಕಾರಗಳ ಮಧ್ಯೆ ಅವರನ್ನು ಬಿಟ್ಟು ನೀನು ಇಲ್ಲೇ ಇರು ಎಂದು ಆಜ್ಞಾಪಿಸಿದಳಂತೆ.

ಎಲ್ಲಾ ಧರ್ಮಗಳಲ್ಲಿಯೂ ಸತ್ಯವೆಂಬ ತತ್ತ್ವವಿದೆ. ಅದನ್ನು ನಿದರ್ಶಿಸುವುದಕ್ಕೆ ಬರೆದ ಪುರಾಣಗಳಿವೆ. ಅದನ್ನು ಅನುಷ್ಠಾನಕ್ಕೆ ತರಲು ಬಾಹ್ಯ ಆಚರಣೆಗಳಿವೆ. ಒಂದೇ ಬಾಹ್ಯ ಆಚಾರ, ಅಥವಾ ಪುರಾಣ ಎಲ್ಲ ಧರ್ಮದಲ್ಲಿಯೂ ಇಲ್ಲದೆ ಇರಬಹುದು. ಆದರೆ ಅವುಗಳ ಗುರಿಯೆಲ್ಲ ಒಂದೆ. ಅನೇಕ ವೇಳೆ ಮತಾಂಧರು ತಮ್ಮ ಪುರಾಣ ನಿಜವಾಗಿ ನಡೆದಿದ್ದು; ಉಳಿದ ಧರ್ಮಗಳ ಪುರಾಣ, ಕಂತೆ ಪುರಾಣವೆನ್ನುವರು. ಆದರೆ ಎಲ್ಲಾ ಧರ್ಮದ ಪುರಾಣವೂ ಪುರಾಣವೆ. ಅದರ ಹಿಂದೆ ಕೆಲವು ಚಾರಿತ್ರಿಕ ಅಂಶಗಳು ಇರಬಹುದು. ಆದರೆ ಅಲ್ಲಿ ಪ್ರಾಮುಖ್ಯತೆ ಅದಕ್ಕೆ ಅಲ್ಲ. ಪುರಾಣ ಬರುವುದು ಒಂದು ಆಧ್ಯಾತ್ಮಿಕ ಸತ್ಯವನ್ನು ನಿದರ್ಶಿಸುವುದಕ್ಕೆ. ಅದು ಚಾರಿತ್ರಿಕ ದೃಷ್ಟಿಯಿಂದ ಸರಿಯಲ್ಲದೇ ಹೋದರೂ ಪಾರಮಾರ್ಥಿಕ ದೃಷ್ಟಿಯಿಂದ ಅದಕ್ಕೆ ಬೆಲೆ ಇದೆ. ರಾಮಾಯಣ ಮಹಾಭಾರತದಲ್ಲಿ ಬರುವ ವ್ಯಕ್ತಿಗಳು ಚಾರಿತ್ರಿಕ ವ್ಯಕ್ತಿಗಳಲ್ಲದೇ ಇರಬಹುದು. ಆದರೆ ಅವರು ಒಂದು ಆದರ್ಶ. ಮಾನವ ಅದರಂತೆ ಆಗಬಹುದು ಎಂಬುದನ್ನು ತೋರುತ್ತವೆ.

ನಾವು ಅನುಷ್ಠಾನ ಪ್ರಪಂಚಕ್ಕೆ ಇಳಿಯುವಾಗ ಬಾಹ್ಯ ಸಲಕರಣೆಗಳೆಲ್ಲ ಬೇಕಾಗುವುದು. ಎಲ್ಲಿಯವರೆವಿಗೂ ತಾತ್ತ್ವಿಕ ರಂಗದಲ್ಲಿ ನಿಂತು ವಾದ ಮಾಡುತ್ತಿರುವೆವೋ, ಅಲ್ಲಿಯವರೆವಿಗೆ ದೇವರನ್ನು ನಿರ್ಗುಣ ನಿರಾಕಾರ ನಿರಂಜನನೆಂದು ಹೇಳುತ್ತಿರಬಹುದು. ಆದರೆ ನಾವು ಅವನನ್ನು ಕುರಿತು ಚಿಂತಿಸಬೇಕಾದರೆ ನಿರಾಕಾರಕ್ಕೆ ಒಂದು ಆಕಾರ ಕೊಡಬೇಕು, ನಿರ್ಗುಣನಿಗೆ ಗುಣಲೇಪನ ಮಾಡಬೇಕು. ಸರ್ವಾಂತರ್ಯಾಮಿಗೆ ಒಂದು ಸ್ಥಳವನ್ನು ಕಲ್ಪಿಸಬೇಕು. ಆದಕಾರಣವೆ ಎಲ್ಲಾ ಧರ್ಮದಲ್ಲಿಯೂ ಚರ್ಚು, ಮಸೀತಿ, ದೇವಸ್ಥಾನಗಳು ಹುಟ್ಟಿರುವುದು. ಯಾ ವಿಗ್ರಹರು

ವನ್ನು ಹಳಿದಿರುವರೋ ಅವರು ಮತ್ತಾವುದನ್ನೊ ವಿಗ್ರಹದ ಪೀಠಕ್ಕೆ ಏರಿಸುವರು. ಅದು ಖುರಾನಿನ ಸುರವಾಗಬಹುದು, ಪ್ರಾಟೆಸ್ಟೆಂಟರ ಶಿಲುಬೆಯಾಗಬಹುದು, ಪಾರ್ಸಿಯರ ಬೆಂಕಿಯಾಗಬಹುದು. ಅಂತೂ ಒಂದಲ್ಲ ಮತ್ತೊಂದು ಆ ಸ್ಥಳದಲ್ಲಿರುವುದು. ಎಲ್ಲಿಯವರೆವಿಗೆ ಮಾನವನು ನಾಮರೂಪಗಳ ಬೇಲಿಯಲ್ಲಿ ಇರುವನೋ ಅಲ್ಲಿಯವರೆವಿಗೂ ದೇವರಿಗೆ ಗುಣ ಆಕಾರವನ್ನು ಕೊಡುವನು. ಆದರೆ ಇದು ದೇವರನ್ನು ಯಾವುದೋ ಒಂದು ಆಕಾರದಲ್ಲಿ ಬಂಧಿಸುವುದಕ್ಕೆ ಅಲ್ಲ. ಅದನ್ನು ಮೀರಿ ಹೋಗು ವುದಕ್ಕೆ.

ನಾವು ಅವನನ್ನು ಪೂಜೆಮಾಡುವಾಗಲೂ ಪಂಚೇಂದ್ರಿಯಗಳಿಗೆ ಸಂಬಂಧಿಸಿದ ರೂಪ ರಸ, ಶಬ್ದ ಸ್ಪರ್ಶ, ಗಂಧವನ್ನು ಉಪಯೋಗಿಸು ವೆವು. ಪೂಜೆಯ ಸಮಯದಲ್ಲಿ ಗಂಟಾನಾದ ಮಾಡುವೆವು. ಆರತಿ ಎತ್ತುವೆವು, ಪರಿಮಳವನ್ನು ನಿವೇದಿಸುವೆವು, ಆಕಾಶದ ನೆನಪನ್ನು ತರುವ ಒಟ್ಟೆಯನ್ನು ಸಮರ್ಪಿಸುವೆವು. ಗಾಳಿಯನೆನಪನ್ನು ತರುವ ಚಾಮರವನ್ನು ಬೀಸುವೆವು, ಸ್ಪರ್ಶಕ್ಕೆ ಸಂಬಂಧಪಟ್ಟ ಹಲವಾರು ಸೇವೆ ಯನ್ನು ಮಾಡುವೆವು. ಇಂತಹ ಸ್ಥೂಲ ಹೊಟ್ಟಿನ ಒಳಗಡೆ ಸೂಕ್ಷ್ಮ ಭಾವ ಹುದುಗಿದೆ. ಭಾವವನ್ನು ಮುಂದೆ ಬರುವ ಜನರಿಗಾಗಿ ಇಡಬೇ ಕಾದರೆ, ಅದು ಬಾಹ್ಯಾಚಾರದ ಹೊಟ್ಟಿನ ಒಳಗೆ ಇಡಬೇಕು. ಇದಕ್ಕೆ ಶ್ರೀರಾಮಕೃಷ್ಣರು "ಭತ್ತವನ್ನು ತಿನ್ನುವಾಗ ಅಕ್ಕಿಮಾಡಿ ಹೊಟ್ಟನ್ನು ಆಚೆಗೆ ಎಸೆಯುತ್ತೇವೆ. ಆದರೆ ಅದನ್ನು ಬಿತ್ತುವಾಗ ಹೊಟ್ಟಿನಸಮೇತ ಬಿತ್ತುತ್ತೇವೆ" ಎನ್ನುತ್ತಿದ್ದರು. ನಮಗೆ ಇಂದು ತೋರುವ ಹಲವಾರು ಆಚಾರದಲ್ಲಿ ಅರ್ಥ ತೋರದೆ ಇರಬಹುದು. ಆದರೆ ಅದರ ಅಂತರಾಳದಲ್ಲಿ ಅರ್ಥದ ಗುಪ್ತಗಾಮಿನಿ ಹರಿಯುತ್ತಿದೆ.

ಎಲ್ಲ ಜನರಿಗೂ ಒಂದಲ್ಲ ಒಂದು ಬೇಕಾಗಿದೆ. ಕೆಲವರಿಗೆ ತತ್ತ್ವ ಬೇಕು. ಕೆಲವರಿಗೆ ಕಥೆಗಳುಬೇಕು, ಕೆಲವರಿಗೆ ಪೂಜೆಬೇಕು, ಕೆಲವರಿಗೆ ಮೂರೂಬೇಕಾಗಿವೆ. ಯಾವುದನ್ನೂ ಹಳಿಯದೆ ಶ್ರೀ ರಾಮ ಕೃಷ್ಣರು ಇವುಗಳೆಲ್ಲವನ್ನೂ ಸ್ವೀಕರಿಸಿದರು.

ಶ್ರೀ ರಾಮಕೃಷ್ಣರು ಹೆಚ್ಚು ಭಕ್ತಿಗೆ ಪ್ರಾಶಸ್ತ್ಯ ಕೊಡುತ್ತಿದ್ದರು, ಆದರೆ ಅವರ ಭಕ್ತಿಯ ಹಿನ್ನೆಲೆಯಾಗಿ ಯಾವಾಗಲೂ ಜ್ಞಾನವಿರುತಿತ್ತು. ಸ್ವಾಮಿ ವಿವೇಕಾನಂದರೆ ಒಂದುವೇಳೆ ಶ್ರೀರಾಮಕೃಷ್ಣರು ನೋಟಕ್ಕೆ ಭಕ್ತರು, ಒಳಗೆ ಜ್ಞಾನಿಗಳೂ ಎನ್ನುತ್ತಿದ್ದರು. ಹೆಚ್ಚು ಮಾನವರು ಭಾವಜೀವಿಗಳು. ಯುಕ್ತಿ ಭಾವವನ್ನು ಆಶ್ರಯಿಸಿ ಬೆಳೆಯುವುದು. ಆದಕಾರಣವೇ ಶ್ರೀರಾಮಕೃಷ್ಣರು ಭಕ್ತಿಗೆ ಹೆಚ್ಚು ಮಾನ್ಯತೆ ಕೊಟ್ಟರು.

ಪರಮಹಂಸರು ಅಷ್ಟೇ ಪ್ರಾಧಾನ್ಯವನ್ನು ಕರ್ಮಯೋಗಕ್ಕೆ ಕೊಟ್ಟರು. ಒಂದುದಿನ ಭಕ್ತನೊಬ್ಬನು ಶ್ರೀರಾಮಕೃಷ್ಣರೊಂದಿಗೆ ಮಾತನಾಡುತ್ತಿದ್ದಾಗ ಅವನು ತಾನು ಬೇಕಾದಷ್ಟು ಪರರಿಗೆ ಉಪಕಾರ ಮಾಡಬೇಕೆಂದು ಹೇಳುತ್ತಿದ್ದನು. ಇದನ್ನು ಕೇಳಿ ಶ್ರೀ ರಾಮಕೃಷ್ಣರು ಉಪಕಾರದ ಮಾತನ್ನು ಆಡಬೇಡ, ದೇವರೊಬ್ಬನೆ ಇತರರಿಗೆ ಉಪಕಾರ ಮಾಡಬಲ್ಲ. ಸಾಧಾರಣ ಜೀವಿಗಳು ಇತರರಿಗೆ ಸೇವೆಮಾಡಬಲ್ಲರು. ಯಾರು ಬ್ರಹ್ಮಾಂಡವನ್ನು ಸೃಷ್ಟಿಸಿ, ಪಶುಪಕ್ಷಿ ಕ್ರಿಮಿಕೀಟಗಳಿಗೆ ಆಹಾರವನ್ನು ಒದಗಿಸಿರುವನೋ, ಅವನು, ಕೆಲವರಿಗೆ ಸಹಾಯಮಾಡಲಾಗದೆ ಅವರಿಗೆ ಸಹಾಯಮಾಡಿ ಎಂದು ಹೇಳಲಿಲ್ಲ. ಉಪಕಾರವಲ್ಲ ಸೇವೆ ಎಂದರು. ಇದನ್ನು ಸ್ವಾಮಿ ವಿವೇಕಾನಂದರು ಕೇಳಿದರು. ನಂತರ ಕೆಲವು ಸ್ನೇಹಿತರೊಂದಿಗೆ ಮಾತನಾಡುತ್ತಿದ್ದಾಗ, "ಇಂದು ಪರಮಹಂಸರ ಬಾಯಿನಿಂದ ದೊಡ್ಡ ಸತ್ಯವನ್ನು ಕೇಳಿದೆ. ಬದುಕಿದ್ದರೆ ಎಲ್ಲರಿಗೂ ಬೋಧಿಸುವೆನು" ಎಂದರು. ಅವರು ಬೋಧಿಸಿದ ಕರ್ಮಯೋಗವೆಲ್ಲಾ ಉಪಕಾರವಲ್ಲ ಸೇವೆ ಎಂಬ ಒಂದು ಸೂತ್ರದ ಭಾಷ್ಯ.

ಶ್ರೀ ರಾಮಕೃಷ್ಣರು ಎಲ್ಲಾ ಸಾಧನೆಯನ್ನೂ ಮಾಡಿ ಸಿದ್ಧಿ ಎಂಬ ಅಮೃತವನ್ನು ತಮ್ಮ ಹೃದಯದಲ್ಲಿ ಶೇಖರಿಸಿಟ್ಟುಕೊಂಡರು ಆದರೆ ಅಮೃತವನ್ನು ತಾವು ಮಾತ್ರ ಸವಿದು ಧನ್ಯರಾಗ ಬಯಸಲಿಲ್ಲ. ಜಗದ ಕಷ್ಟನಷ್ಟಗಳಲ್ಲಿ ಸಿಕ್ಕಿ ನೊಂದವರಿಗೆಲ್ಲಾ ಇದನ್ನು ಹಂಚಿ ಅವರನ್ನು ಸುಖಿಗಳನ್ನಾಗಿ ಮಾಡಬಯಸಿದರು. ಆನಂದ ಯಾವಾಗಲೂ

ಮತ್ತೊಬ್ಬನಿಗೆ ಹಂಚಿದಾಗ ಇಮ್ಮಡಿಸುವುದು. ಪರಮಹಂಸರು ಶಿಷ್ಯರಿಗೆ ಕಾದುಕುಳಿತರು.

ಪ್ರಪಂಚದಲ್ಲಿ, ಗುರುಶಿಷ್ಯರನ್ನು ಯಾವುದೋ ಕಾಣದ ನಿಯಮ ಒಂದು ಬಂಧಿಸುವುದು. ಒಬ್ಬರಿಗೆ ಮತ್ತೊಬ್ಬರ ಪರಿಚಯವಿಲ್ಲದೇ ಇದ್ದರೂ ಒಬ್ಬರು ಮತ್ತೊಬ್ಬರಿಗೆ ಕಾತುರರಾಗಿರುವರು. ಒಂದು ಸಿದ್ಧವಾದರೆ ಮತ್ತೊಂದು ಅದನ್ನು ಹುಡುಕಿಕೊಂಡು ಬಂದೇಬರುವುದು. ಹೂವು ಅರಳಿದರೆ ದುಂಬಿಗಳಿಗೆಲ್ಲಾ ಅದು ನಿಮಂತ್ರಣವನ್ನು ಕಳುಹಿಸುವುದಿಲ್ಲ. ಅದರ ಪರಿಮಳ ಮತ್ತು ಬಣ್ಣವೇ ದುಂಬಿಗಳನ್ನು ತನ್ನೆಡೆಗೆ ಸೆಳೆಯುವುದು. ಶ್ರೀ ರಾಮಕೃಷ್ಣರ ತಪೋಶಕ್ತಿ ಹಲವು ಪಕ್ವಕ್ಕೆಬಂದು ಸಾಧಕರನ್ನು ತಮ್ಮೆಡೆಗೆ ಸೆಳೆಯಿತು.

ಶ್ರೀರಾಮಕೃಷ್ಣರು ಪ್ರತಿದಿನವೂ ಸಂಜೆ ತಮ್ಮ ಕೋಣೆಯ ಮೇಲೆ ಹೋಗಿ ಕಲ್ಕತ್ತೆಯಕಡೆ ನೋಡುತ್ತ, "ಎಲ್ಲಿ ನನ್ನ ಮಕ್ಕಳು ಇನ್ನೂ ಬರಲಿಲ್ಲವಲ್ಲಾ" ಎಂದು ದುಃಖಿಸುತ್ತಿದ್ದರು. ಜಗನ್ಮಾತೆಯನ್ನು ಕಾಣಲು ಮೊದಲು ಎಷ್ಟು ತವಕಪಟ್ಟರೋ ಅಷ್ಟೇ ತವಕಪಟ್ಟರು ಶಿಷ್ಯರ ಆಗಮನಕ್ಕೆ. ಈ ಮಹಾ ಕರೆ ಅಶಕ್ತವ್ಯವಾದರೂ ಹಲವು ಜೀವಿಗಳಿಗೆ ಮುಟ್ಟಿ ಒಬ್ಬೊಬ್ಬರನ್ನಾಗಿ ತನ್ನಕಡೆಗೆ ಸೆಳೆಯಿತು.

ಶ್ರೀರಾಮಕೃಷ್ಣರು ಒಬ್ಬಸುರಿತ ಗುರುಗಳು. ಜಗದ ರಹಸ್ಯವನ್ನು ಅರಿತವರು. ವೈವಿಧ್ಯತೆಯೇ ಸೃಷ್ಟಿ ನಿಯಮ. ಪ್ರತಿಯೊಂದು ವ್ಯಕ್ತಿಯಲ್ಲಿಯೂ ಒಂದು ವೈಶಿಷ್ಟ್ಯತೆ ಇದೆ. ಅದಕ್ಕೆ ಭಂಗಬರದಂತೆ ತರಪೇತನ್ನು ಕೊಡುತ್ತಿದ್ದರು. ನಿಜವಾದ ಗುರುವಿನ ಕೆಲಸ ಹಲವು ಬಗೆಯ ಹೂವಿನಗಿಡಗಳಿಂದ ತುಂಬಿರುವ ತೋಟಗಾರನ ಕೆಲಸದಂತೆ. ಪ್ರತಿಯೊಂದು ಗಿಡದಿಂದಲೂ ಒಂದೇ ಬಗೆಯ ಹೂವನ್ನು ನಿರೀಕ್ಷಿಸುವುದಿಲ್ಲ. ಬಗೆಬಗೆ ಹೂವಿನ ಗಿಡಗಳಿವೆ. ಪ್ರತಿಯೊಂದು ಹೂವಿನ ಗಿಡಕ್ಕೆ ನೀರು ಬೆಳಕು ಒಂದೇ ಆದರೂ, ಅಗತೆಮಾಡುವರೀತಿ ಹಾಕುವ ಗೊಬ್ಬರ ಮತ್ತು ಇನ್ನೂ ಇತರವಿಷಯಗಳಲ್ಲಿ ಎಷ್ಟೋ ವ್ಯತ್ಯಾಸವಿರುವುದು. ಕೊಡುವ ಬುದ್ಧಿವಾದದಲ್ಲಿ ಕೆಲವು ಸರ್ವರಿಗೂ ಸಾಮಾನ್ಯವಾಗಿರುವುವು

ಇವೆ. ಜತೆಗೆ ಆಯಾ ವ್ಯಕ್ತಿಗೆ ಮಾತ್ರ ಅನ್ವಯಿಸುವುವೂ ಇವೆ. ಬಂದ ಶಿಷ್ಯರ ನ್ಯೂನಾತಿರೇಕಗಳನ್ನು ತಿದ್ದಿ, ಅವರೆಲ್ಲರನ್ನೂ ಭಗವಂತನ ಪೂಜೆಗೆ ಯೋಗ್ಯರಾದ ಪುಷ್ಪವನ್ನಾಗಿ ಮಾಡಿದರು.

ಶ್ರೀರಾಮಕೃಷ್ಣರಿಗೆ ಶಿಷ್ಯರ ಮೇಲೆ ಇದ್ದ ಪ್ರೀತಿ ಅಸಾಧಾರಣ ವಾದುದು. ತಾಯಿ ತಂದೆಯ ಪ್ರೀತಿಯನ್ನು ಕೂಡ ಮರೆಯಿಸುವಂತ ಹುದು ಇದು. ತಮ್ಮಲ್ಲಿರುವ ತಪಶ್ಶಕ್ತಿಯನ್ನು ಮತ್ತೊಬ್ಬರಿಗೆ ಕೊಡ ಬೇಕಾದರೆ ಪ್ರೀತಿ ಎಂಬ ಮಧ್ಯವರ್ತಿ ಆವಶ್ಯಕ. ನಿಜವಾದ ಗುರು ತನ್ನ ತಪಶ್ಶಕ್ತಿಯನ್ನೆಲ್ಲ ಶಿಷ್ಯನಿಗೆ ಕೊಟ್ಟು, ಅವರು ಉದ್ಧಾರವಾಗುವವರೆವಿಗೂ ತಮ್ಮ ಮುಕ್ತಿಯನ್ನು ಕೂಡ ಬದಿಗೆ ಇಡುವರು. ಮೊದಲು ಶಿಷ್ಯರ ಎದೆಗೆ ತಟ್ಟಿದ್ದು ಪರಮಹಂಸರಲ್ಲಿದ್ದ ಆಧ್ಯಾತ್ಮಿಕ ಸತ್ಯಗಳಲ್ಲ; ಅವರ ಹೇರಳ ಪ್ರೇಮ. ಆ ಪ್ರೇಮ ಮಹಾಸ್ತ್ರ ಎಲ್ಲರನ್ನೂ ಒಲಿಸಿಕೊಂಡಿತು ಅವರಲ್ಲಿ ಪ್ರಖ್ಯಾತರಾದ ವಿವೇಕಾನಂದರಂತಹ ಹಲವಾರು ಶಿಷ್ಯರು ತಾವು ಪರಮಹಂಸರ ಪ್ರೇಮದ ದಾಸರೆಂದು ಹೇಳಿಕೊಳ್ಳುತ್ತಿದ್ದರು.

ವಿಮರ್ಶಾತ್ಮಕ ಬುದ್ಧಿ ಎಲ್ಲರಲ್ಲಿಯೂ ಬೆಳೆಯುವಂತೆ ಮಾಡುತ್ತಿದ್ದರು. ಯಾವುದನ್ನೂ ವಿಚಾರಮಾಡಿದಲ್ಲದೆ, ಪರೀಕ್ಷಿಸಿದಲ್ಲದೆ ಒಪ್ಪಿಕೊಳ್ಳ ಬೇಡ ಎನ್ನುತ್ತಿದ್ದರು. ಅವರ ಬೋಧನೆ ಮತ್ತು ಜೀವನವನ್ನು ಹಲವರು ಹಲವು ರೀತಿಯಲ್ಲಿ ಪರೀಕ್ಷಿಸಿದರು. ಶಿಷ್ಯರು ತಮ್ಮನ್ನು ಪರೀಕ್ಷಿಸಿದರೆ ಕೋಪ ತಾಳದೆ ಆನಂದದಿಂದ ಅದನ್ನು ನೋಡುತ್ತಿದ್ದರು. ಕಾಮ ಕಾಂಚನ ತ್ಯಾಗ ಇವರ ಉಪದೇಶದ ಪಲ್ಲವಿಯಾಗಿತ್ತು. ಒಂದು ದಿನ ಮುಂದೆ ಸ್ವಾಮಿ ವಿವೇಕಾನಂದರಾಗುವವರು ಶ್ರೀರಾಮಕೃಷ್ಣರು ಹೊರಗೆ ಹೋದ ಸಮಯದಲ್ಲಿ ಒಂದು ನಾಣ್ಯವನ್ನು ಅವರ ಹಾಸಿಗೆಯ ಕೆಳಗೆ ಇಟ್ಟರು. ಶ್ರೀರಾಮಕೃಷ್ಣರು ಬಂದು ಹಾಸಿಗೆಯ ಮೇಲೆ ಕುಳಿತೊಡನೆಯೇ ಚೇಳು ಕುಟುಕಿದಂತೆ ಆಯಿತು. ಹಾಸಿಗೆಯನ್ನು ಹುಡುಕಿ ನೋಡಿದಾಗ ಒಂದು ರೂಪಾಯಿ ಬಿತ್ತು. ಪರಮಹಂಸರು ಯಾವುದನ್ನು ಬಿಟ್ಟಿದ್ದರೋ ಅದು ಅಷ್ಟು ಆಳಕ್ಕೆ ಹೋಗಿತ್ತು.

ಮತ್ತೊಬ್ಬ ಶಿಷ್ಯನು ಶ್ರೀರಾಮಕೃಷ್ಣರು ಅರ್ಧರಾತ್ರಿ ಎದ್ದು ಗಂಗಾನದಿಯ ತೀರಕ್ಕೆ ಹೋಗಿದ್ದಾಗ ಇವರು ಇಂತಹ ಅವೇಳ ಸಮಯದಲ್ಲಿ ಎದ್ದು ಎಲ್ಲಿಗೆ ಹೋಗುತ್ತಾರೆ, ಶಾರದಾದೇವಿಯವರ ಕೋಣೆಕಡೆ ಹೋಗಬಹುದೆ! ಎಂದು ಅಲ್ಲೇ ಹೊಂಚು ಕಾಯುತ್ತಿದ್ದರು. ಸ್ವಲ್ಪ ಹೊತ್ತಾದ ಮೇಲೆ ಶ್ರೀರಾಮಕೃಷ್ಣರು ಶಾರದಾದೇವಿಯವರ ಕೋಣೆಯ ಕಡೆ ಹೋಗದೆ ಸೀದಾ ತಮ್ಮ ರೂಮಿನ ಕಡೆ ಬಂದರು. ಹೊಂಚುಕಾಯುತ್ತಿದ್ದ ಶಿಷ್ಯ ಇವರನ್ನು ಅನುಮಾನಿಸಿದ್ದಕ್ಕಾಗಿ ನಾಚಿ ಪರಮಹಂಸರಿಗೆ ನಮಸ್ಕಾರಮಾಡಿ ಕ್ಷಮಾಪಣೆ ಕೇಳಿದನು. ಆಗ ಶ್ರೀರಾಮಕೃಷ್ಣರು ಸಾಧುವನ್ನು ಹಗಲು ಪರೀಕ್ಷೆ ಮಾಡಿದರೆ ಸಾಲದು, ರಾತ್ರಿಯೂ ಪರೀಕ್ಷಿಸಬೇಕು ಎಂದರು.

ಭಕ್ತಿಯ ಹೆಸರಿನಲ್ಲಿ ಧರ್ಮದ ಹೆಸರಿನಲ್ಲಿ ಮೂರ್ಖನಾದರೆ ಅದನ್ನು ಸಹಿಸುತ್ತಿರಲಿಲ್ಲ. ಯಾರೊ ಒಬ್ಬ ಶಿಷ್ಯನ ಕೈಯಲ್ಲಿ ಪೇಟೆಯಿಂದ ಒಂದು ಸಾಮಾನು ತರುವುದಕ್ಕೆ ಹೇಳಿದರು. ಆತನೂಕೂಡ ಸರಿಯಾಗಿ ಪರೀಕ್ಷೆಮಾಡದೆ ತಂದನು. ಅದಕ್ಕೆ ಶ್ರೀರಾಮಕೃಷ್ಣರು ಶಿಷ್ಯರು ವ್ಯಾಪಾರಕ್ಕೆ ಅಂಗಡಿಗೆ ಹೋದರೆ ಸರಿಯಾಗಿ ಪರೀಕ್ಷೆಮಾಡಬೇಕು. ಅಂಗಡಿಯಲ್ಲಿ ಧರ್ಮಕ್ಕಲ್ಲ ವರ್ತಕರು ಇರುವುದು ಎಂದು ಬುದ್ಧಿ ಹೇಳಿದರು. ಸಾಮಾನನ್ನು ಕೊಂಡಾದ ಮೇಲೆ ಕೊಸರು ಕೇಳುವುದನ್ನು ಮರೆಯಬೇಡಿ ಎಂದರು. ಅಸಡ್ಡೆ, ಮರವು ಇವು ಯಾವ ರೂಪಿನಲ್ಲಿ ಬಂದರೂ ಸಹಿಸುತ್ತಿರಲಿಲ್ಲ. ನಾನು ಮತ್ತೊಂದು ಕ್ಷಣದಲ್ಲಿ ಪ್ರಪಂಚ ಮರೆತು ಸಮಾಧಿಯಲ್ಲಿ ಮಗ್ನನಾಗುತ್ತೇನೆ. ಆದರೆ ಯಾವುದನ್ನೂ ಮರೆಯುವುದಿಲ್ಲ. ನಿಮಗೇಕೆ ಇಂತಹ ಮರವು. ಇದು ಆಧ್ಯಾತ್ಮಿಕ ಜೀವನದ ಕುರುಹಲ್ಲವೆಂದರು.

ಒಬ್ಬ ಶಿಷ್ಯನು ತುಂಬಾ ಮೃದು ಸ್ವಭಾವದವನು. ಒಂದು ಗಟ್ಟಿ ಮಾತನ್ನಾಡಿದರೂ ಸಹಿಸುವುದಕ್ಕೆ ಆಗುತ್ತಿರಲಿಲ್ಲ. ಆತ ಕೆಲವರೊಡನೆ ಒಂದು ದಿನ ದೋಣಿಯಲ್ಲಿ ಬರುತ್ತಿದ್ದಾಗ ಕೆಲವರು ಶ್ರೀರಾಮಕೃಷ್ಣರನ್ನು ಹಾಸ್ಯಮಾಡುತ್ತಿದ್ದರು. ಈತ ಇದನ್ನು ಸುಮ್ಮನೆ ಕೇಳು

ತ್ತಿದ್ದನು. ದಕ್ಷಿಣೇಶ್ವರಕ್ಕೆ ಬಂದಮೇಲೆ ಈ ಸಮಾಚಾರವನ್ನು ಅವರಿಗೆ ಹೇಳಿದನು. ಶ್ರೀರಾಮಕೃಷ್ಣರು ಏನು ಗುರುನಿಂದೆ ಮಾಡುತ್ತಿದ್ದರೂ ನೀನು ಸುಮ್ಮನೆ ಕೇಳುತ್ತಿದ್ದೆಯ? ಆ ಸ್ಥಳವನ್ನು ಬಿಟ್ಟಾದರೂ ಬರಬೇಕಾಗಿತ್ತು ಎಂದರು.

ಮತ್ತೊಬ್ಬ ಶಿಷ್ಯನ ಸ್ವಭಾವ ಉಗ್ರ. ಆತನ ಜೀವನ ಮಾಗುವುದಕ್ಕೆ ಸ್ವಲ್ಪ ಮೃದುತನ ಬರಬೇಕಾಗಿತ್ತು. ಅಂತಹ ಶಿಷ್ಯನೊಬ್ಬನು ದೋಣಿಯಲ್ಲಿ ಬರುತ್ತಿದ್ದಾಗ ಹಿಂದಿನಂತೆಯೇ ಕೆಲವರು ಶ್ರೀರಾಮಕೃಷ್ಣರನ್ನು ದೂರುತ್ತಿದ್ದರು. ಇದನ್ನು ಕೇಳಿ ತುಂಬಾ ಕೋಪತಾಳಿ ದೋಣಿಯ ಒಂದು ಕಡೆಗೆ ಹೋಗಿ, ನೀವು ನನ್ನ ಗುರುನಿಂದನೆಯನ್ನು ನಿಲ್ಲಿಸದೇ ಇದ್ದರೆ ದೋಣಿಯನ್ನು ಮುಳುಗಿಸುತ್ತೇನೆ ಎಂದು ದೋಣಿಯನ್ನು ಅಲ್ಲಾಡಿಸ ತೊಡಗಿದನು. ದೋಣಿಯಲ್ಲಿದ್ದವರು ಅಂಜಿ ಸುಮ್ಮನಾದರು. ಶ್ರೀರಾಮಕೃಷ್ಣರಿಗೆ ಈ ಸಮಾಚಾರವನ್ನು ಹೇಳಿದ ಮೇಲೆ, ಅವರು, ಕೋಪದಿಂದ ಎಂತಹ ಅನಾಹುತ ಮಾಡುತ್ತಿದ್ದೆ. ಅವರು ಬೈದರೆ ನನಗೇನಾಯಿತು ಎಂದರು,

ಶ್ರೀರಾಮಕೃಷ್ಣರು ಪ್ರತಿಯೊಬ್ಬರ ಶೀಲವನ್ನು ಪರೀಕ್ಷಿಸಿ ಅವರವರಿಗೆ ತಕ್ಕ ಸಲಹೆಯನ್ನು ಕೊಡುತ್ತಿದ್ದರು.

ಶ್ರೀರಾಮಕೃಷ್ಣರು ಪ್ರಪಂಚವನ್ನು ಬಿಟ್ಟ ಕೆಲವು ಸಂನ್ಯಾಸಿಗಳಿಗೆ ಮಾತ್ರ ಆದರ್ಶಪ್ರಾಯವಾಗಲು ಬಯಸಲಿಲ್ಲ. ಗೃಹಸ್ಥರಿಗೂ ಆದರ್ಶಪ್ರಾಯರಾಗಿದ್ದರು. ಜಗತ್ತಿನ ಆಧ್ಯಾತ್ಮಿಕ ಜೀವನದಲ್ಲಿ ಇಂತಹ ಒಂದು ಜೀವನ ಸಿಕ್ಕುವುದು ಅಪರೂಪ. ಕೆಲವರು ಮದುವೆಯಾಗದೆ ಕೊನೆಯವರೆವಿಗೂ ಇರುವರು. ಕೆಲವರು ಮೊದಲು ಮದುವೆಯಾಗಿ ವೈರಾಗ್ಯದ ಸುಳಿಗಾಳಿಗೆ ಬಿದ್ದು ಹೆಂಡತಿ, ಮನೆ, ಮಕ್ಕಳು ಎಲ್ಲವನ್ನು ಬಿಟ್ಟು ಹೋದವರು ಇರುವರು. ಆದರೆ ಮೊದಲು ಮದವೆಯಾಗಿ ವೈರಾಗ್ಯದ ಸುಳಿಗಾಳಿಯಲ್ಲಿ ಸಿಕ್ಕಿರುವಾಗಲೂ, ಭಗವಂತನ ಸಾಕ್ಷಾತ್ಕಾರವಾದ ಮೇಲೆಯೂ, ಶ್ರೀರಾಮಕೃಷ್ಣರು ಕೈ ಹಿಡಿದ ಸತಿಯನ್ನು ತೊರೆಯಲಿಲ್ಲ. ಗೃಹಸ್ಥನಾಗಿಯೂ ಸಂನ್ಯಾಸಿಗೆ ಸರಿಸಮನಾದ ಜೀವನ

ವನ್ನು ನಡೆಸಲು ಸಾಧ್ಯವೆಂಬುದನ್ನು ಪರಮಹಂಸರು ತೋರಿರು ವರು.

ಶ್ರೀ ಶಾರದಾ ದೇವಿಗೆ ಹದಿನಾರು ವರುಷವಾದಾಗ ಶ್ರೀರಾಮ ಕೃಷ್ಣರನ್ನು ನೋಡಲು ದಕ್ಷಿಣೇಶ್ವರಕ್ಕೆ ಬಂದರು. ಶ್ರೀರಾಮಕೃಷ್ಣರು ಆದರದಿಂದ ಅವರನ್ನು ಬರಮಾಡಿಕೊಂಡು ಉಪಚರಿಸಿದರು. ಅಷ್ಟು ಹೊತ್ತಿಗೆ ಮಧುರನಾಥನು ತೀರಿಹೋಗಿದ್ದನು. "ಆತನಿದ್ದರೆ ನಿನಗೆ ಇಲ್ಲಿ ಇಳಿದುಕೊಳ್ಳುವುದಕ್ಕೆ ಬೇಕಾದಷ್ಟು ಅನುಕೂಲವನ್ನು ಮಾಡಿ ಕೊಡು ತ್ತಿದ್ದನು," ಎಂದರು. ಶಾಸ್ತ್ರೀಯವಾಗಿ ಶ್ರೀರಾಮಕೃಷ್ಣರು ಶ್ರೀ ಶಾರದಾ ದೇವಿಯನ್ನು ಮದುವೆಯಾಗಿದ್ದರು. ಆದಕಾರಣ ತಾವು ಯಾವುದನ್ನು ಮಾಡಬೇಕಾದರೂ ಅವರ ಒಪ್ಪಿಗೆ ಮತ್ತು ಸಹಾನುಭೂತಿ ಇಲ್ಲದೆ ಮಾಡ ಬಯಸಲಿಲ್ಲ. ಬಲಾತ್ಕಾರವಾಗಿ ಏನೊಂದನ್ನೂ ಅವರು ಶಾಥದಾದೇವಿಯವರ ಮೇಲೆ ಹೇರಲಿಲ್ಲ. ಶ್ರೀರಾಮಕೃಷ್ಣರು ಶಾರದಾ ದೇವಿಯವರಿಗೆ, "ನನಗೆ ಎಲ್ಲಾ ಸ್ತ್ರೀಯರೂ ಜಗನ್ಮಾತೆಯ ಪ್ರತಿಬಿಂಬ ದಂತೆ ಕಾಣುವರು. ನಾನು ನಿನ್ನಲ್ಲಿಯೂ ಅದನ್ನೇ ನೋಡುತ್ತೇನೆ. ಆದರೆ ನೀನು ಇಂದ್ರಿಯ ಪ್ರಪಂಚದಲ್ಲಿ ಇರಲು ಇಚ್ಛೆಪಟ್ಟರೆ ಅದಕ್ಕೆ ನಾನು ಸಿದ್ಧವಾಗಿರುವೆ. ನಿನಗೆ ಯಾವುದು ಬೇಕು ಕೇಳು" ಎಂದರು. ಆದರೆ ಶ್ರೀ ಶಾರದಾದೇವಿಯವರು ಪರಮಹಂಸರಿಗೆ ತಕ್ಕ ಸತಿ. ತಾವೂ ಅವರಂತೆಯೇ ಆಗಲು ಬಯಸಿದರು. ಇದನ್ನು ಕೇಳಿ ಶ್ರೀರಾಮಕೃಷ್ಣ ರಿಗೆ ಅತ್ಯಾನಂದವಾಯಿತು. ಆಜನ್ಮ ಬ್ರಹ್ಮಚರ್ಯ ವ್ರತಧಾರಿಗಳಾಗಿ ಇಬ್ಬರೂ ಜಗನ್ಮಾತೆಯ ಕೆಲಸಕ್ಕೆ ಟೊಂಕಕಟ್ಟಿ ನಿಂತರು.

ಎಂದು ಶ್ರೀ ಶಾರದಾದೇವಿಯವರು ಪ್ರಾಪಂಚಿಕ ಸುಖವನ್ನು ತೊರೆದು ತಾವೂ ಅವರಂತೆಯೇ ಜಗನ್ಮಾತೆಯ ಭಕ್ತರಾಗಲು ಬಯಸಿದರೋ ಅಂದಿನಿಂದಲೇ ಶ್ರೀರಾಮಕೃಷ್ಣರು ಸತಿಯ ಜೀವನದ ಜವಾಬ್ದಾರಿಯನ್ನೆಲ್ಲ ತೆಗೆದುಕೊಂಡರು. ಸಂಸಾರದಲ್ಲಿ ಹೇಗೆ ನಡೆದುಕೊಳ್ಳಬೇಕು, ಪೂಜೆ, ಜಪ, ತಪ, ಸಾಧನೆಗಳನ್ನು ಹೇಗೆ ಮಾಡಬೇಕು, ಎಂಬುದರಿಂದ ಹಿಡಿದು ನಿರ್ವಿಕಲ್ಪ ಸಮಾಧಿಯವರೆವಿಗೆ ಅವರನ್ನು ಕರೆದುಕೊಂಡು ಹೋದರು.

ಶಾರದಾ ದೇವಿಯವರ ಜೀವನದಲ್ಲಿ ಅವರ ಅಮರ್ತ್ಯ ಪ್ರೇಮ ಎಷ್ಟು ಮಧುರವಾಗಿತ್ತು ಎಂಬುದನ್ನು ಶಾರದಾ ದೇವಿಯವರ ಜೀವನದಲ್ಲಿ ಚಿತ್ರಿಸಿರುವೆವು. ಸಾಧಾರಣ ಜೀವರು ದೇಹ ಸಂಬಂಧವನ್ನು ಮೀರಿ ಹೋದರೆ ಅಲ್ಲಿ ಆನಂದವೆಲ್ಲಿಂಬುದೆಂದು ಶಂಕಿಸಬಹುದು. ಆದರೆ ನಿಜವಾದ ಆನಂದ ದೇಹವನ್ನು ಮೀರಿ ಹೋದಾಗ ಮಾತ್ರ ಸಿಕ್ಕುವುದು. ಎಲ್ಲಿಯವರೆವಿಗೂ ಜೀವಿಗಳು ದೇಹ ಬುದ್ಧಿಯಲ್ಲಿ ಮಾತ್ರ ಸರಳುತ್ತಿರುವರೋ ಅಲ್ಲಿ ಕಾಮಮಿಶ್ರ ಪ್ರೇಮ ಮಾತ್ರ ಸಿಕ್ಕುವುದು. ದೇಹ ಮೀರಿ ಹೋದಾಗ ಮಾತ್ರ ಶುದ್ಧ ಪ್ರೇಮ ಸಿಕ್ಕುವುದು.

ಶ್ರೀರಾಮಕೃಷ್ಣರ ಕೀರ್ತಿ ಹಬ್ಬುತ್ತಾ ಬಂದಿತು. ಕಲ್ಕತ್ತೆಯ ಅನೇಕ ಪ್ರಮುಖ ವ್ಯಕ್ತಿಗಳು ಇವರನ್ನು ನೋಡಲು ಬರುತ್ತಿದ್ದರು. ಕೆಲವು ವೇಳೆ ಶ್ರೀರಾಮಕೃಷ್ಣರೇ ಅವರನ್ನು ನೋಡಲು ಹೋಗುತ್ತಿದ್ದರು. ಕೇಶವಚಂದ್ರಸೇನ ಬ್ರಹ್ಮ ಸಮಾಜದ ಮುಂದಾಳು. ಪ್ರಖ್ಯಾತವಾಗ್ಮಿ. ಪರಮಹಂಸರ ಹತ್ತಿರದ ಭಕ್ತನಾದ. ಒಂದು ದಿನ ಶ್ರೀರಾಮಕೃಷ್ಣರೇ ಈಶ್ವರಚಂದ್ರ ವಿದ್ಯಾಸಾಗರನನ್ನು ನೋಡುವುದಕ್ಕೆ ಹೋದರು. ಘನ ವಿದ್ವಾಂಸನಾದ ಈಶ್ವರಚಂದ್ರ, ಪರಮಹಂಸರ ಬಾಯಿನಿಂದ ಬರುವ ಮಾತನ್ನು ಕೇಳಿ, ಶಾಸ್ತ್ರಗಳ ಜಟಿಲ ಸಮಸ್ಯೆಯನ್ನು ಕೂಡ ಇವರ ಮಾತು ಬಗೆಹರಿಸಬಲ್ಲದೆಂದು ತಿಳಿದನು. ಮಹರ್ಷಿ ದೇವೇಂದ್ರನಾಥ ಠಾಕೂರರನ್ನು ನೋಡಲು ಶ್ರೀರಾಮಕೃಷ್ಣರೆ ಒಂದು ದಿನ ಮಧುರನಾಥನೊಂದಿಗೆ ಹೋದರು. ದಯಾನಂದ ಸರಸ್ವತಿ ಶ್ರೀರಾಮಕೃಷ್ಣರನ್ನು ನೋಡುವುದಕ್ಕೆ ದಕ್ಷಿಣೇಶ್ವರಕ್ಕೆ ಬಂದಿದ್ದನು.

ಮುಂದೆ ಪ್ರಪಂಚವನ್ನೇ ವಿಸ್ಮಯಗೊಳಿಸಿದಂತ ಸ್ವಾಮಿ ವಿವೇಕಾನಂದ ಮುಂತಾದ ಶಿಷ್ಯರು ಆಗ ಅನಾಮಧೇಯರಾಗಿ ಬಂದು ಹೋಗುತ್ತಿದ್ದರು.

ಶ್ರೀರಾಮಕೃಷ್ಣರಿಗೆ ಬಂದ ಶಿಷ್ಯರೊಡನೆ ಮಾತನಾಡಿ, ಮಾತನಾಡಿ, ಗಂಟಲಿನಲ್ಲಿ ಹುಣ್ಣಾಯಿತು. ಮಾತನಾಡಬೇಡಿ ಎಂದು ವೈದ್ಯರು ಎಷ್ಟು ಹೇಳಿದರೂ ಕೇಳುತ್ತಿರಲಿಲ್ಲ. ಯಾರಾದರೂ ಬದ್ಧ ಜೀವಿಗಳು

ಬಂದು ಇವರ ಹತ್ತಿರ ನಿಂತು ಭಗವಂತನ ವಿಷಯವನ್ನು ಎತ್ತಿದರೆ ಸಾಕು, ಯಾತನೆಯನ್ನು ಗಮನಕ್ಕೆ ತಾರದೆ ಮಾತನಾಡಲು ಮೊದಲು ಮಾಡುವರು. "ನನ್ನ ಮಾತಿನಿಂದ ಇತರರಿಗೆ ಶಾಂತಿ ಸಿಕ್ಕುವ ಹಾಗೆ ಇದ್ದರೆ, ಇಂತಹ ಎಷ್ಟು ನೋವನ್ನಾದರೂ ಸಹಿಸುತ್ತೇನೆ. ಭವ ಜೀವಿಗಳ ಉದ್ಧಾರಕ್ಕೆ ಎಷ್ಟು ಜನ್ಮಗಳನ್ನಾದರೂ ಎತ್ತಲು ಸಿದ್ಧನಾಗಿರುವೆ" ಎನ್ನುತ್ತಿದ್ದರು.

ಶ್ರೀರಾಮಕೃಷ್ಣರೆಂಬ ದೇಹದ ಗೂಡಿನಲ್ಲಿ ವಾಸಿಸುತ್ತಿದ್ದ ಜೀವದ ಹಕ್ಕಿ ೧೮೮೬ ನೇ ಇಸವಿ ಆಗಸ್ಟ್ ೧೬ ನೇ ತಾರೀಖು ಹಾರಿಹೋಯಿತು. ಅಂದಿನಿಂದ ವಿಶ್ವವಿಹಾರಿ ಆಯಿತು. ಅವರ ತಪಸ್ಸು ಸರ್ವತೋಮುಖ ವಾಗಿ ಬಹುಜನರ ಹಿತಕ್ಕೆ, ಬಹು ಜನರ ಸುಖಕ್ಕೆ, ಸಾಧಕವಾಯಿತು.

ಶ್ರೀರಾಮಕೃಷ್ಣರು ಸನಾತನ ಹಿಂದೂ ಧರ್ಮದ ಪೂರ್ಣ ಪ್ರತಿನಿಧಿ. ಯಾವುದನ್ನೂ ಅವರು ಅಲ್ಲಗಳೆಯಲಿಲ್ಲ. ಎಲ್ಲವನ್ನೂ ಪೂರ್ಣಮಾಡಿದರು. ಹಿಂದುವಾಗಿಯೇ ಇದ್ದು ಎಲ್ಲಾ ಧರ್ಮವನ್ನು ಸಾಧನೆ ಮಾಡಬಹುದೆಂಬುದನ್ನು ತೋರಿದರು. ಎಲ್ಲಾ ಧರ್ಮದ ಹಿಂದೆ ಇರುವುದೊಂದೇ ಸತ್ಯವೆಂಬುದು ಅವರ ಅನುಭವದ ಆಳದಿಂದ ಬಂದ ಮಾತು. ಹಿಂದುಗಳು, ಮಹಮ್ಮದೀಯರು, ಕ್ರೈಸ್ತರು, ಧರ್ಮದ ಹೆಸರಿನಲ್ಲಿ ವೈಮನಸ್ಯವನ್ನು ಹರಡುವ ಬದಲು, ಶ್ರೀರಾಮಕೃಷ್ಣರಂತಹ ಒಂದು ಆದರ್ಶವಿದ್ದರೆ, ಹಿಂದುಗಳು ಉತ್ತಮ ಹಿಂದೂಗಳಾಗುವರು, ಮಹಮ್ಮದೀಯರು ಉತ್ತಮ ಮಹಮ್ಮದೀಯರಾಗುವರು, ಕ್ರೈಸ್ತರು ಉತ್ತಮ ಕ್ರೈಸ್ತರಾಗುವರು.

ನಾವು ಇಂದು ವೈಜ್ಞಾನಿಕ ಯುಗದಲ್ಲಿ ಇರುವೆವು. ಪ್ರತಿ ವರ್ಷವೂ ಕಣ್ಣನ್ನು ಕೋರೈಸುವ ಹೊಸ ಹೊಸ ನಿಯಮಗಳನ್ನು ವೈಜ್ಞಾನಿಕರು ಪ್ರಕೃತಿಯ ಭಂಡಾರದಿಂದ ಹೊರಗೆ ತೆಗೆಯುತ್ತಿರುವರು. ಅಲ್ಲಾವುದ್ದೀನನ ಕೈಯ್ಯಲ್ಲಿದ್ದ ಮಾಯಾ ದೀಪದಂತೆ ಆಗಿದೆ ಇಂದು ವಿಜ್ಞಾನ ಮಾನವನ ಕೈಯ್ಯಲ್ಲಿ. ಆ ದೀಪವನ್ನು ಉಜ್ಜಿದ ತಕ್ಷಣವೇ ಒಬ್ಬ ರಾಕ್ಷಸ ಬಂದು ಯಾವ ಕೆಲಸವನ್ನು ಹೇಳಿದರೆ ಅದನ್ನು ಕಣ್ಣು

ಮಿಟಿಕಿಸುವುದರೊಳಗೆ ಮಾಡಿಟ್ಟು ಹೋಗುವನು. ಪ್ರಪಂಚದಲ್ಲಿ ಕೋಟ್ಯಾಂತರ ನಕ್ಷತ್ರಗಳಿವೆ. ಅದರಲ್ಲಿ ಒಂದು ಮಧ್ಯಮ ತರಗತಿಗೆ ಸೇರಿದ ನಕ್ಷತ್ರ ನಮ್ಮ ಸೂರ್ಯ. ಆತನ ಸುತ್ತಲೂ ಪ್ರದಕ್ಷಿಣೆ ಮಾಡುತ್ತಿರುವ ಗ್ರಹಗಳಲ್ಲಿ ಮಧ್ಯಮ ತರಗತಿಗೆ ಸೇರಿದ ಗ್ರಹ ನಮ್ಮ ಭೂಮಿ. ಅದರಲ್ಲಿ, ಆಕಾರ ಗಾತ್ರದಲ್ಲಿ ಕ್ಷುದ್ರತನುನಾಗಿರುವನು ಮಾನವ. ಆದರೆ ಈ ಸಣ್ಣ ಮನುಷ್ಯ ಮಾಡುವ ಕಾರ್ಯಗಳಿಗೆ ದೇವರೇ ಆಶ್ಚರ್ಯ ಪಡುವನೇನೊ !

ತಾರೆ ನಿಹಾರಿಕೆಗಳನ್ನು ಅಳೆಯುವನು,ತೂಗುವನು, ಅವುಗಳ ಅಂತರ್ಯದಲ್ಲಿ ಏನಿದೆ ಎಂದು ಪರೀಕ್ಷಿಸುವನು. ಎಷ್ಟು ಕೋಟಿ ವರುಷದ ಹಿಂದೆ ಇದು ಹುಟ್ಟಿತು; ಮತ್ತೆಷ್ಟು ಕೋಟಿ ವರುಷ ಇದು ಬದುಕಬಲ್ಲದೆಂದು ಎಲ್ಲೋ ಕೆಲವು ವರ್ಷ ಬಾಳಿ, ಅಳಿದು ಹೋಗುವ ಮನುಷ್ಯ ಅವುಗಳ ಜಾತಕವನ್ನು ಬರೆಯುವನು

ಕ್ಷಣಾರ್ಧದಲ್ಲಿ ಸುದ್ದಿಯನ್ನು ಪ್ರಪಂಚದ ಸುತ್ತಲೂ ಕಳುಹಿಸುವನು; ದೂರದಲ್ಲಿ ಏನಾಗುತ್ತಿದೆ ಎಂಬುದನ್ನು ತನ್ನ ಕೋಣೆಯಲ್ಲಿ ವಿರಾಮವಾಗಿ ಕುಳಿತು, ಕೇಳುವನು, ನೋಡುವನು. ಮೃಗಕ್ಕಿಂತ ವೇಗವಾಗಿ ತಿರೆಯ ಮೇಲೆ ಓಡುವನು. ಹಕ್ಕಿಯಂತೆ ಆಕಾಶದಲ್ಲಿ ಹಾರುವನು, ಮೀನಿನಂತೆ ನೀರಿನಲ್ಲಿ ಮುಳುಗುವನು. ಕಣ್ಣಿಗೆ ಕಾಣದ ಸಣ್ಣ ಕಣ ಒಂದರಲ್ಲಿ, ಒಂದು ಹೊಸ ಪ್ರಪಂಚವನ್ನು ಹೊರಗೆಡಹುವನು. ಗಾತ್ರದಲ್ಲಿ ತೂಕದಲ್ಲಿ ಭೂಮಿಗಿಂತ ಕೋಟ್ಯಾಂತರ ಪಾಲು ವಿಸ್ತಾರವಾಗಿರುವ ವಿರಾಟ್ ವಿಶ್ವವನ್ನು ತನ್ನ ಕಲ್ಪನಾ ಬಾಹುವಿನಿಂದ ಸೆಳೆದು ಸಣ್ಣ ಕಣದಂತೆ ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸಬಲ್ಲನು.

ಜ್ವಾಲಾಮುಖಿ, ಭೂಕಂಪಗಳನ್ನು ಮೀರುವ ಧ್ವಂಸ ಕಾರ್ಯವನ್ನು ಮನುಷ್ಯನು ಮಾಡಬಲ್ಲನು. ಕರ್ಣಾರ್ಜುನರ ಮಂತ್ರಾಸ್ತ್ರಗಳನ್ನು ಮೀರಿಸುವ ಶಸ್ತ್ರಾಸ್ತ್ರಗಳನ್ನು ನಿರ್ಮಿಸಬಲ್ಲನು.

ಇದನ್ನೆಲ್ಲಾ ನೋಡಿದರೆ ರೋಮಾಂಚನವೇನೊ ಆಗುವುದು. ಜನರ ಕಣ್ ಮನವನ್ನು ಮುಗ್ಧಗೊಳಿಸುವುದು. ಬಾಹ್ಯ ಸುಖ

ಸಂಪತ್ತನ್ನು ಹೆಚ್ಚಿಸಿರುವುದು. ಆದರೆ ಜಗತ್ತಿಗೆ ಇದರಿಂದ ಶಾಂತಿ ಎಷ್ಟು ಲಭಿಸಿದೆ? ಪರಸ್ಪರ ಸೌಹಾರ್ದ ಎಷ್ಟು ಉಂಟಾಗಿದೆ? ಮಾನವ ಮೃಗಕ್ಕಿಂತ ಎಷ್ಟು ಮೇಲಕ್ಕೆ ನೈತಿಕ ಮಟ್ಟದಲ್ಲಿ ಏರಿರುವನು? ಈ ಪ್ರಶ್ನೆಗಳನ್ನು ಹಾಕಿದಾಗ ನಾವು ನಾಚಬೇಕಾಗುವುದು. ಹಿಂದೆ ಜನರು ಕೋಲು ಕಲ್ಲುಗಳಿಂದ ಕಾಯುತ್ತಿದ್ದರು. ಇಂದು ಬಾಂಬು ಬುಲೆಟ್ಟು ಗಳಿಂದ ಕಾಯುವರು. ನಮ್ಮ ನಾಗರಿಕತೆ ಹೊರಗೆ ಮೆರಗು ಕೊಡುವು ದಾಗಿದೆಯೆ ಹೊರತು, ಮಾನವ ಜೀವನದ ಅಂತರಾಳವನ್ನು ಪ್ರವೇಶಿಸಿಲ್ಲ.

ಈ ಬಾಹ್ಯ ಜಗತ್ತನ್ನು ಮೀರಿದ ಮತ್ತೊಂದು ಜಗತ್ತಿದೆ. ಅದೇ ಮನುಷ್ಯನ ಆಂತರಿಕ ಜಗತ್ತು. ಕಾಮ ಕ್ರೋಧಗಳೆಂಬ ಮಹಾ ಜ್ವಾಲೆ ಅಲ್ಲಿ ಉರಿಯುತ್ತಿದೆ. ಯಾರು ಅದನ್ನು ಮೀರಿ ಹೋಗಿರು ವರೋ, ಭಗವಂತನಲ್ಲಿ ಐಕ್ಯರಾಗಿರುವರೋ, ಅವರಿಂದ ಮಾತ್ರ ಜಗತ್ತಿಗೆ ಕಲ್ಯಾಣವಾಗಿರುವ ಮಾತು ಒಂದಿವೆ. ಅವರಿಂದ ಮಾತ್ರ ಶಾಂತಿ ಸೌಹಾರ್ದ ನೆಲಸುವುದಕ್ಕೆ ಸಾಧ್ಯ. ಅವರ ಕಣ್ಣೆದುರಿಗೆ ಜಾತಿ, ಕುಲ, ಗೋತ್ರ, ದೇಶಗಳ ಭಿನ್ನತೆ ಮಾಯವಾಗಿವೆ. ಎಲ್ಲರೂ ಅವರ ಕಣ್ಣಿಗೆ ಮಾತ್ರ, ಭಗವಂತನ ಮಕ್ಕಳಂತೆ ಕಾಣುವರು. ಅವರೆದೆ ಮಾತ್ರ ಸರ್ವರಿಗೂ ಮಿಡಿಯುವುದು. ಇಂತಹ ಮಹಾ ವಿಭೂತಿ ವ್ಯಕ್ತಿ ಶ್ರೀರಾಮಕೃಷ್ಣ. ಅವರು ಒಂದು ವ್ಯಕ್ತಿ ಮಾತ್ರವಲ್ಲ. ಅನಂತ ಶಕ್ತಿಯ ಗಣಿ. ಅವರು ಮಾತ್ರ ಭವಸಾಗರವನ್ನು ದಾಟಲಿಲ್ಲ. ಮುಂದೆ ಬರುವ ಜನಾಂಗ ದಾಟುವುದಕ್ಕೆ ಒಂದು ನಾವೆಯಂತೆ ನಿಂತಿದೆ ಅವರ ಜೀವನ ಮತ್ತು ಸಂದೇಶ. ಇಂತಹ ಪುಣ್ಯಾತ್ಮನಿಗೆ ಜನನವಿತ್ತ ಕುಲಪವಿತ್ರ, ಹೆತ್ತತಾಯಿ ಧನ್ಯಳು, ಅವರ ಪಾದ ಧೂಳಿ ಸೋಕಿದ ನೆಲ ಪುಣ್ಯಭೂಮಿ.

ಕೆಲವು ಸಂದೇಶ :—

ನೀವು ರಾತ್ರಿ ಆಕಾಶದಲ್ಲಿ ಹಲವು ನಕ್ಷತ್ರಗಳನ್ನು ನೋಡುತ್ತೀರಿ. ಸೂರ್ಯೋದಯವಾದೊಡನೆ ಅವು ಕಾಣುವುದಿಲ್ಲ. ಆದರೆ ಹಗಲು ನಕ್ಷತ್ರ ವಿಲ್ಲವೆಂದು ಹೇಳುವಿರೇನು? ಅದರಂತೆಯೆ ನೀವು ಅಜ್ಞಾನದಲ್ಲಿರುವಾಗ ದೇವರು ಕಾಣದೆ ಹೋದರೆ ದೇವರು ಇಲ್ಲವೆನ್ನಬೇಡಿ.

ದೇವರು ನಿರಾಕಾರನೂ ಹೌದು, ಸಾಕಾರನೂ ಹೌದು. ಅವನು ಸಾಕಾರ ನಿರಾಕಾರವನ್ನು ಮೀರಿಯೂ ಇರುವನು. ಅವನು ಇನ್ನೂ ಏನೇನು ಆಗಿರುವನೊ ಅದನ್ನು ದೇವರೆ ಬಲ್ಲ.

ಸಾಕಾರದೇವರು ಕಣ್ಣಿಗೆ ಕಾಣುವನು. ಒಬ್ಬನು ತನ್ನ ಪ್ರಿಯ ಸ್ನೇಹಿತನನ್ನು ಮುಟ್ಟುವಂತೆ ಸ್ಪರ್ಶಮಾಡಲೂಬಹುದು.

ಎಲ್ಲಿಯವರೆವಿಗೂ ಗಂಟೆಯ ಶಬ್ದ ಕೇಳುವುದೊ ಅಲ್ಲಿಯವರೆವಿಗೆ ಶಬ್ದ ಆಕಾರದ ವಲಯದೊಳಗೆ ಇರುವುದು. ಆದರೆ ಎಂದು ಅದನ್ನು ನಾವು ಕೇಳಲಾರೆವೊ ಆಗ ಅದು ಅವ್ಯಕ್ತವಾಗುವುದು. ಅದರಂತೆಯೇ ದೇವರಿಗೆ ಸಾಕಾರ ನಿರಾಕಾರಗಳೆರಡೂ ಇರುವುದು.

ಪಹರೆಯವನು ರಾತ್ರಿ ತನ್ನ ಕೈಯ್ಯಲ್ಲಿರುವ ದೀಪದ ಮೂಲಕ ಯಾರನ್ನು ಬೇಕಾದರೂ ನೋಡಬಹುದು. ಆದರೆ ತಾನೆ ದೀಪವನ್ನು ತನ್ನ ಮುಖದ ಕಡೆಗೆ ತಿರುಗಿಸಿಕೊಳ್ಳುವವರೆವಿಗೆ ಯಾರೂ ಅವನ ಮುಖ ವನ್ನು ನೋಡಲಾರರು. ಅದರಂತೆಯೇ ದೇವರು ಎಲ್ಲರನ್ನೂ ನೋಡು ತ್ತಿರುವನು. ದೇವರೇ ದಯೆತೋರಿ, ನಮಗೆ ದರ್ಶನ ಕೊಡುವವರೆವಿಗೆ ಯಾರೂ ಅವನನ್ನು ನೋಡಲಾರರು.

ಸೂರ್ಯ ಪ್ರಪಂಚವನ್ನು ಬೆಳಗುವನು. ಆದರೆ ಸಣ್ಣದೊಂದು ಮೋಡ ನಮಗೆ ಸೂರ್ಯನನ್ನು ಕಾಣದಂತೆ ಮಾಡುವುದು. ಇದರಂ ತೆಯೇ ಕೆಲಸಕ್ಕೆ ಬಾರದ ಸಣ್ಣದೊಂದು ಮಾಯಾತೆರೆ, ಸರ್ವ ವ್ಯಾಪಿ ಯಾದ, ಸಾಕ್ಷಿಭೂತನಾದ, ಸಚ್ಚಿದಾನಂದ ಸ್ವರೂಪನನ್ನು ನಮಗೆ ಕಾಣದಂತೆ ಮಾಡುವುದು.

ನನ್ನ ಕೈಯ್ಯಲ್ಲಿರುವ ಬಟ್ಟೆಯನ್ನು ನನ್ನ ಮುಂದೆ ಹಿಡಿದುಕೊಂಡರೆ ನಾನು ನಿಮಗೆ ಎಷ್ಟು ಹತ್ತಿರವಿದ್ದರೂ ಹೇಗೆ ಕಾಣುವುದಿಲ್ಲವೋ ಇದರಂತೆಯೇ ದೇವರು ಎಲ್ಲರಿಗಿಂತಲೂ ಹತ್ತಿರದಲ್ಲಿದ್ದರೂ ಮಧ್ಯೆ ಅಹಂಕಾರವೆಂಬ ತೆರೆ ಇರುವುದರಿಂದ ನೀವು ಅವನನ್ನು ನೋಡಲಾರಿರಿ.

ನಾನು ಯಾವಾಗ ಮುಕ್ತನಾಗುವೆ? "ನಾನು" ಎಂಬುದು ಮಾಯವಾದಾಗ. ನಾನು ನನ್ನದು ಅಜ್ಞಾನ. ನೀನು ನಿನ್ನದು ಜ್ಞಾನ.

ಎಲ್ಲಾ ಭಗವದಿಚ್ಛೆಯಿಂದ ಆಗುವುದೆಂಬ ದೃಢಸಂಜಿಕೆ ಒಂದರೆ ಒಬ್ಬನು ದೇವರ ಕೈಯ್ಯಲ್ಲಿ ಯಂತ್ರವಾಗುವನು. ಆಗ ಅವನು ಬದುಕಿರುವಾಗಲೆ ಮುಕ್ತ.

'ನಾನು' ಎಂಬುದನ್ನು ನೀವು ನಾಶಮಾಡಲು ಆಗದೆ ಇದ್ದರೆ 'ನಾನು' ಸೇವಕ ಎಂಬ ಭಾವವಿರಲಿ. ನಾನು ದೇವರ ಸೇವಕ, ಅವನ ಭಕ್ತನೆಂದು ತಿಳಿದರೆ ಅಷ್ಟು ಅಪಾಯವಿಲ್ಲ.

ನೀನು ಒಳ್ಳೆಯವನಾಗಬೇಕು, ಪರಿಶುದ್ಧನಾಗಬೇಕು ಎಂದು ಪರಿತಪಿಸುತ್ತಿದ್ದರೆ ದೇವರು ಒಬ್ಬ ಸದ್ಗುರುವನ್ನು ಕಳುಹಿಸುವನು. ನಮಗೆ ಅತ್ಯಾವಶ್ಯಕವಾಗಿ ಬೇಕಾಗಿರುವುದು ಅಂತಹ ಶ್ರದ್ಧೆ.

ಮಾನವನ ಗುರಿ ಭಗವಂತನ ಸಾಕ್ಷಾತ್ಕಾರಕ್ಕೆಂದು ತಿಳಿದುಕೊಳ್ಳುವವರು ಅತಿವಿರಳ.

ಪ್ರಾಪಂಚಿಕರು ಎಷ್ಟು ವ್ಯಥೆ ಪಟ್ಟರೂ, ಕಷ್ಟ ಅನುಭವಿಸಿದರೂ, ಜಾಗ್ರತರಾಗುವುದೇ ಇಲ್ಲ. ಒಂಟೆಗೆ ಮುಳ್ಳಿನ ಗಿಡ ಇಷ್ಟ. ಅದನ್ನು ತಿಂದಷ್ಟೂ ಬಾಯಿನಲ್ಲಿ ರಕ್ತ ಸೋರುವುದು. ಆದರೂ ಅದನ್ನು ತಿನ್ನುವುದು ಬಿಡುವುದಿಲ್ಲ.

ಹೇಗೆ ಕಂಬವನ್ನು ಹಿಡಿದುಕೊಂಡು ಬಹಳ ವೇಗವಾಗಿ ಸುತ್ತುತ್ತಿರುವ ಹುಡುಗ ಬೀಳುವುದಿಲ್ಲವೋ, ಹಾಗೆಯೆ, ದೇವರನ್ನು ಹಿಡಿದುಕೊಂಡು ಪ್ರಪಂಚದ ಕೆಲಸ ಮಾಡಿ. ಆಗ ಅಪಾಯದಿಂದ ಪಾರಾಗುವಿರಿ.

ನೀವು ಪ್ರಪಂಚದಲ್ಲಿರುವಾಗ ಏನು ಮಾಡಬೇಕು? ನೀವು ಆತನಿಗಾಗಿ ಎಲ್ಲವನ್ನೂ ಕೊಡಿ. ಅವನಲ್ಲಿ ಶರಣಾಗಿ. ನಿಮಗೆ ಮತ್ತಾವ ತೊಂದರೆಯೂ ಇರುವುದಿಲ್ಲ. ಆಗ ಎಲ್ಲಾ ಅವನಿಚ್ಛಾಪ್ರಕಾರ ಆಗುವುದು ಗೊತ್ತಾಗುವುದು.

ಸಮಾಜದಲ್ಲಿರುವವರು, ಗೃಹಸ್ಥರಂತೆ ಆತ್ಮರಕ್ಷಣೆಗಾಗಿ ಪಾಪವನ್ನು ತಡೆಯುವಂತೆ ನಟಿಸಬೇಕು. ಆದರೆ ಪ್ರತೀಕಾರವನ್ನು ಎಂದಿಗೂ ಮಾಡಬೇಡಿ.

ಹೇಗೆ ಒಲೆಯ ಮೇಲಿಟ್ಟ ಹಸಿಯ ಸೌದೆ ಕ್ರಮೇಣ ಒಣಗಿ ಹೋಗುವುದೊ ಹಾಗೆಯೆ ಯಾರು ದೇವರಲ್ಲಿ ಶರಣಾಗತರಾಗಿ, ಅವನ

ಮಂಗಳ ನಾಮವನ್ನು ಸ್ಮರಿಸುವರೋ, ಅವರ ಪಾಪ ಬತ್ತಿ ಹೋಗು ವುದು. ಯಾರು ಪ್ರಾಪಂಚಿಕ ವಸ್ತುಗಳ ಮೇಲೆ ತಮಗೆ ಇರುವ ಆಸಕ್ತಿ ನಿಂತಮೇಲೆ ದೇವರನ್ನು ಕುರಿತು ಯೋಚಿಸುತ್ತೇವೆ ಎಂದು ತಿಳಿದುಕೊಂಡಿರುವರೋ, ಅವರು ಹಾಗೆ ಮಾಡುವುದಕ್ಕೆ ಆಗುವುದೇ ಇಲ್ಲ. ಅಂತಹಕಾಲ ಪ್ರಾಪ್ತವಾಗುವುದಿಲ್ಲ.

ಮನುಷ್ಯ ಜನ್ಮದಲ್ಲಿ ಹುಟ್ಟುವಂತಹ ಅಪೂರ್ವ ಪುಣ್ಯ ಪಡೆ ದಿದ್ದರೂ, ಯಾರು ದೇವರನ್ನು ಪಡೆಯುವುದಕ್ಕೆ ಪ್ರಯತ್ನಿಸುವುದಿಲ್ಲವೋ ಅವನ ಬಾಳು ವ್ಯರ್ಥ.

ದೇವರು ಎಲ್ಲರಲ್ಲಿಯೂ ಇರುವನು. ಆದರೆ ದೇವರಲ್ಲಿ ಎಲ್ಲರೂ ಇಲ್ಲ. ಅದಕ್ಕೇ ಮಾನವನು ತೊಂದರೆಗೆ ಒಳಗಾಗುವುದು.

ಹಾಲಿನಲ್ಲಿ ಬೆಣ್ಣೆ ಇದೆ ಎಂದು ಸುಮ್ಮನೆ ಕಿರಿಚಿಕೊಂಡರೆ ಬೆಣ್ಣೆ ಸಿಕ್ಕುವುದಿಲ್ಲ. ನಿಮಗೆ ಬೆಣ್ಣೆ ಬೇಕಾದರೆ ಹಾಲನ್ನು ಮೊಸರು ಮಾಡಿ ಕಡಿಯಬೇಕು. ಆಗ ಮಾತ್ರ ಬೆಣ್ಣೆ ಸಿಕ್ಕುವುದು. ಅದರಂತೆಯೇ ದೇವರನ್ನು ನೋಡಬೇಕಂಬ ಇಚ್ಛೆ ಇದ್ದರೆ ಸಾಧನೆ ಮಾಡಿ.

ನಾನು ನಿಜವಾಗಿ ಹೇಳುತ್ತೇನೆ ಕೇಳಿ. ಯಾರಿಗೆ ದೇವರು ಬೇಕೊ ಅವರಿಗೆ ಅವನು ಸಿಕ್ಕುವನು. ಇದನ್ನು ನಿಮ್ಮ ಜೀವನದಲ್ಲಿ ಪರೀಕ್ಷೆ ಮಾಡಿ ನೋಡಿ. ಮೂರು ದಿನ ಪ್ರಯತ್ನಪಡಿ. ಜಯಶೀಲ ರಾಗುವುದರಲ್ಲಿ ಸಂದೇಹವಿಲ್ಲ.

ಪ್ರಾಪಂಚಿಕನಿಗೆ, ಭೋಗ ವಸ್ತುಗಳ ಮೇಲೆ ಇರುವ ಆಸಕ್ತಿ ಯಷ್ಟು ತೀವ್ರವಾಗಿ, ನೀವು, ದೇವರನ್ನು ಪ್ರೀತಿಸಿದರೆ ನಿಮಗೆ ಅವನು ದೊರಕುವನು.

ಹಲವು ಶತಮಾನದಿಂದ ಕೋಣೆಯೊಳಗೆ ಹುದುಗಿದ ಕತ್ತಲೆ ಒಂದು ದೀಪ ಬಂದೊಡನೆಯೆ ಮಾಯವಾಗುವುದು. ಹಾಗೆಯೆ ಭಗವಂತನ ಕೃಪಾದೃಷ್ಟಿಯೊಂದು ಹಲವು ಜನ್ಮಗಳಿಂದ ಶೇಖರಿಸಿದ ಅಜ್ಞಾನ ಮತ್ತು ದೋಷವನ್ನು ಓಡಿಸುವುದು.

ನಿಮಗೆ ಸೂಕ್ತತೋರಿದ ರೀತಿಯಲ್ಲಿ ಅವನನ್ನು ಪ್ರಾರ್ಥಿಸಿ. ಭಗವಂತ ನಿಜವಾಗಿ ಅದನ್ನು ಕೇಳುವನು. ಅವನು ಇರುವೆ ಕಾಲಿನ ಸಪ್ಪಳವನ್ನು ಕೂಡ ಆಲಿಸಬಲ್ಲ.

---

# ಶ್ರೀ ಶಾರದಾ ದೇವಿ

ಶ್ರೀ ರಾಮಕೃಷ್ಣ ಪರಮಹಂಸರು ದಕ್ಷಿಣೇಶ್ವರದಲ್ಲಿ ಕಠೋರವಾದ ತಪಸ್ಸಿನಲ್ಲಿ ನಿರತರಾಗಿದ್ದರು. ಹೊರಗಿನ ಪ್ರಪಂಚದ ಅರಿವೇ ಅವರಿಗೆ ಇರಲಿಲ್ಲ. ಅವರು ಕಾಳಿಕಾದೇವಿಯ ಪೂಜೆಯನ್ನು ಮಾಡುತ್ತಿದ್ದುದು ಒಂದು ಅಲೌಕಿಕ ರೀತಿ. ಇವರ ನಡತೆ ಮಾತು ಮುಂತಾದುವು ಸಾಧಾರಣ ಜನರಿಗೆ ಇವರು ಹುಚ್ಚರು ಎಂಬ ಭಾವನೆಯನ್ನು ಕೊಡುತ್ತಿತ್ತು.

ಶ್ರೀ ರಾಮಕೃಷ್ಣರ ತಾಯಿ ಚಂದ್ರಮಣಿದೇವಿ ಆಗ ಕಮಾರಪುಕೂರನೆಂಬ ಅವರ ಹಳ್ಳಿಯಲ್ಲಿ ಇದ್ದರು. ಮಗ ಹುಚ್ಚನಾಗಿ ಹೋಗಿರುವನು ಎಂಬ ಸುದ್ದಿ ಅವರಿಗೆ ತಿಳಿಯಿತು. ಇದನ್ನು ಕೇಳಿ ತಾಯಿಯ ಎದೆ ತಲ್ಲಣಿಸಿತು. ಮಗನನ್ನು ಕಮಾರಪುಕೂರಕ್ಕೆ ಕರೆದುಕೊಂಡು ಬಂದರು. ಔಷಧಿ ಕೊಡಿಸಿದರು. ಯಂತ್ರ ತಂತ್ರಗಳನ್ನು ಮಾಡಿಸಿದರು. ದೇಹ ಉತ್ತಮಗೊಂಡರೂ ಇವರಿಗೆ ದೇವರ ಮೇಲೆ ಇದ್ದ ತೀವ್ರ ಭಕ್ತಿ ತಗ್ಗಲಿಲ್ಲ.

ಚಂದ್ರಮಣಿ ದೇವಿಗೆ, ನೆಂಟರು ಮತ್ತು ಸ್ನೇಹಿತರು, ಹುಡುಗನ ಹುಚ್ಚನ್ನು ಬಿಡಿಸುವುದಕ್ಕೆ ಹಲವು ಉಪಾಯಗಳನ್ನು ಹೇಳಿದರು. ಅದರಲ್ಲಿ ಒಂದು ಅವರಿಗೆ ಸೂಕ್ತವೆಂದು ತೋರಿತು. ಅದೇ ಹುಡುಗನಿಗೆ ಮದುವೆ ಮಾಡಿದರೆ ಹುಚ್ಚು ಬಿಡುವುದು ಎನ್ನುವ ಸಲಹೆ. ಆದರೆ ಹುಚ್ಚು ಬಿಟ್ಟ ಹೊರತು ಹೆಣ್ಣು ಸಿಕ್ಕಬೇಕಲ್ಲ ಮದುವೆಗೆ! ಅಂತೂ ಮಾರನೆ ದಿನದಿಂದಲೆ ಪರಮಹಂಸರಿಗೆ ಮದುವೆ ಮಾಡುವುದಕ್ಕೆ ಹೆಣ್ಣಿನ ಬೇಟೆಗೆ ಶುರುವಾಯಿತು.

ಮೊದಲು ಮೊದಲು ಈ ಸುದ್ದಿಯನ್ನು ಪರಮಹಂಸರಿಗೆ ತಿಳಿಸಲಿಲ್ಲ. ತಿಳಿಸಿದರೆ ಎಲ್ಲಿ ಅವರು ಓಡಿ ಹೋಗಿ ಬಿಡುವರೊ ಎಂಬ ದಿಗಿಲು. ನೆಂಟರು ಎಷ್ಟು ಹುಡುಕಿದರೂ ಸರಿಯಾದ ಹೆಣ್ಣು ಸಿಕ್ಕಲಿಲ್ಲ. ಇದರಿಂದ

ಅವರಿಗೆ ಚಿಂತೆಯಾಯಿತು. ಒಂದು ದಿನ ಪರಮಹಂಸರು ಏಕೆ ಚಿಂತಾ ಮಗ್ನರಾಗಿರುವಿರಿ ಎಂದು ಕೇಳಿದರು. ಅವರು "ನಿನಗೆ ಮದುವೆ ಮಾಡಬೇಕೆಂದು ಇರುವೆವು. ಎಷ್ಟು ಹುಡುಕಿದರೂ ಹೆಣ್ಣೆ ಸಿಕ್ಕಲಿಲ್ಲ. ಇದರಿಂದ ತುಂಬಾ ವ್ಯಾಕುಲವಾಗಿದೆ" ಎಂದರು. ಪರಮಹಂಸರು "ಹೆಣ್ಣಿಗಾಗಿ ಅಲ್ಲಿ ಇಲ್ಲಿ ಹುಡುಕಿ ಪ್ರಯೋಜನವೇನು? ನನಗಾಗಿ ಹೆಣ್ಣು ಜಯರಾಮವಟಿಯಲ್ಲಿ ಬೆಳೆಯುತ್ತಿದೆ, ಅಲ್ಲಿ ಹೋಗಿ ವಿಚಾರಿಸಿ" ಎಂದರು. ಇವರ ಮಾತಿನಲ್ಲಿ ನೆಂಟರಿಗೆ ಮೊದಲು ಅಷ್ಟು ನಂಬಿಕೆ ಬರಲಿಲ್ಲ. ಅಂತೂ ವಿಚಾರಿಸಿ ನೋಡೋಣ ಎಂದು ಜಯರಾಮವಟಿ ಯಲ್ಲಿ ರಾಮಚಂದ್ರ ಮುಖ್ಯೋಪಾಧ್ಯಾಯರೆಂಬ ಬ್ರಾಹ್ಮಣರ ಮನೆ ಯಲ್ಲಿ ವಿಚಾರಿಸಿದರು. ಅಲ್ಲಿ ಒಂದು ಹೆಣ್ಣು ಇತ್ತು. ಆದರೆ ಅದಕ್ಕೆ ಐದೇ ವಯಸ್ಸು. ಆಗ ಪರಮಹಂಸರಿಗೆ ಇಪ್ಪತ್ತು ಮೂರು ವಯಸ್ಸು. ಬೇರೆ ಹೆಣ್ಣು ಸಿಕ್ಕದೇ ಇರುವಾಗ ಇದಕ್ಕೆ ಒಪ್ಪಿದರು. ಸಣ್ಣದೇನು ದೊಡ್ಡದೇನು, ಹೆಣ್ಣು ಎಂಬುದು ಒಂದು ಇದ್ದರೆ ಸಾಕು. ಗಂಡಸಿನ ಮನಸ್ಸು ಅವಳ ಮೇಲೆ ಹೋಗಿ ಉಳಿದ ಹುಚ್ಚೆಲ್ಲಾ ಮಾಯವಾಗು ವುದು ಎಂದು ಆಶಿಸಿದರು.

ಪರಮಹಂಸರ ಹುಚ್ಚನ್ನು ಬಿಡಿಸುವುದಕ್ಕೆ ಕಟ್ಟಿದ ಹೆಣ್ಣೆ ಶಾರದಾದೇವಿ. ಅವರಿಗೆ ದೇವರ ಹುಚ್ಚನ್ನು ಬಿಡಿಸುವ ಬದಲು ಇವರಿಗೆ ಆ ಹುಚ್ಚು ತಾಕಿತು. ಇವರೂ ಪರಮ ಹಂಸರಂತೆ ಭಗವಂತನ ಸಾಕ್ಷಾತ್ಕಾರವನ್ನು ಪಡೆದರು. ಅವರ ಸತಿಯಾಗಿ ಬಂದರೂ, ಅವರ ಮೊದಲ ಶಿಷ್ಯರಾದರು. ಇಬ್ಬರೂ ಆ ಜನ್ಮ ಬ್ರಹ್ಮಚರ್ಯ ವ್ರತವನ್ನು ಕೈಕೊಂಡರು. ಪರಮಹಂಸರು ಬದುಕಿರುವ ತನಕ ಅವರ ಸೇವೆಯಲ್ಲಿ ಮತ್ತು ದೇವರ ಧ್ಯಾನದಲ್ಲಿ ಕಳೆದರು. ಪತಿಯ ಕಾಲಾನಂತರ ಪರಮಹಂಸರು ಯಾವ ಸಂದೇಶವನ್ನು ಜಗತ್ತಿಗೆ ಸಾರಿದರೊ, ಅವರ ಪ್ರಮುಖ ಶಿಷ್ಯರಾದ ಸ್ವಾಮಿ ವಿವೇಕಾನಂದರು ಜಗತ್ತಿನ ಮೂಲೆ ಮೂಲೆಗೆ ಬಿತ್ತಿದರೋ, ಅದನ್ನೇ ಶಾರದಾ ದೇವಿಯವರು ಮೌನವಾಗಿ ಅನುಷ್ಠಾನದ ಮೂಲಕ ಭರತ ಖಂಡದಲ್ಲಿ ಬೋಧಿಸಿದರು.

ಕ್ಷಮೆಯಲ್ಲಿ ಮಹಾತಾಯಿ ಸೀತೆಯ ನೆನಪನ್ನು ತರುವುದು ಶ್ರೀ ಶಾರದಾ ದೇವಿಯವರ ಜೀವನ. ಭಕ್ತಿಯಲ್ಲಿ ಅವ್ವೈ ಅಂಡಾಳ್, ಅಕ್ಕ ಮಹಾದೇವಿಯಂತೆ ಇರುವರು. ಜ್ಞಾನದಲ್ಲಿ ಹಿಂದೆ ಜನಕರಾಜನ ಆ ಸ್ಥಾನದಲ್ಲಿ ಇದ್ದ ಗಾರ್ಗಿಯ ನೆನಪು ತರುವುದು. ಪವಿತ್ರವಾದ ದೊಡ್ಡ ಜೀವನ ಅದು. ನಮ್ಮ ಭರತ ಖಂಡ ಇನ್ನೂ ತಪಸ್ವಿನಿಯರಿಗೆ, ಭಕ್ತೆಯರಿಗೆ, ಮಹಾ ತಾಯಿಯರಿಗೆ ತವರೂರು ಎಂಬುದನ್ನು ಸಾರುವುದು.

ಶ್ರೀ ಶಾರದಾ ದೇವಿಯವರು, ಪರಮಹಂಸರು ಭಾರತೀಯ ನಾರಿಯರ ಆದರ್ಶದ ವಿಚಾರವಾಗಿ ಹೇಳಿದ ಕೊನೆಯ ಮಾತು. ಪರಮ ಹಂಸರು ಭಾರತೀಯ ನಾರಿಯರಿಗೆ ಎಂದೆಂದಿಗೂ ಆದರ್ಶಪ್ರಾಯವಾ ಗಿರುವಂತೆ ತಮ್ಮ ಧರ್ಮ ಪತ್ನಿಯನ್ನು ಬಿಟ್ಟು ಹೋದರು. ಹಲವಾರು ಕಥೆ ಕಾದಂಬರಿಗಳು, ಶಾಸನಗಳು ಮಾಡದೆ ಇರುವುದನ್ನು ಇದು ಮಾಡಿರುವುದು. ಭಾರತೀಯ ನಾರಿಯನ್ನು ನಿರ್ಲಕ್ಷ್ಯದ ಕಸದ ಬುಟ್ಟಿಯಿಂದ ಮೇಲೆತ್ತಿರುವುದು. ಪರಮಹಂಸರು ಶಾರದಾ ದೇವಿಯನ್ನು ಜಗನ್ಮಾತೆಯ ಪೀಠದಲ್ಲಿಟ್ಟು ಪೂಜಿಸಿದರು. ಒಂದು ಜನಾಂಗ ಗೌರವ ದಿಂದ ಬಾಳಬೇಕಾದರೆ ಶಕ್ತಿ ಪೂಜೆ ಮಾಡಬೇಕು. ಗೌರವದಿಂದ ನಾರಿಯ ರನ್ನು ನೋಡಬೇಕು. ಅಲ್ಲಿ ದೇವತೆಗಳು ಸುಪ್ರೀತರಾಗುವರು. ಮನೆ ಶಾಂತವಾಗಿರುವುದು. ದೇಶ ಪ್ರಗತಿಯ ಶಿಖರಕ್ಕೆ ಏರುವುದು.

ಇನ್ನು ಶಾರದಾದೇವಿಯವರ ಜೀವನ ಪರಿಚಯಕ್ಕೆ ಹೊರಡೋಣ.

ಕಲ್ಕತ್ತೆಗೆ ಸುಮಾರು ಅರವತ್ತು ಮೈಲಿ ದೂರದಲ್ಲಿ ಬಂಕೂರ ಜಿಲ್ಲೆಗೆ ಸೇರಿದ ಜಯರಾಮವಟಿ ಎಂಬ ಸಣ್ಣ ಗ್ರಾಮವಿದೆ. ಅಲ್ಲಿ ಸುಮಾರು ನಾನೂರು ಐನೂರು ಜನರಿದ್ದರು. ಮುಕ್ಕಾಲು ಪಾಲು ಜನ ಬೇಸಾಯಗಾರರು. ಹತ್ತಿರದಲ್ಲೇ ಆಮೋದರಾ ಎಂಬ ನದಿ ಹರಿಯುತ್ತಿತ್ತು. ಸುತ್ತಲೂ ಗದ್ದೆ. ಪೈರು ಬೆಳೆದು ನಿಂತಿರುವಾಗ ಜಯರಾಮವಟಿ ಹಸರು ಕಡಲಿನಲ್ಲಿ ತೇಲುತ್ತಿದ್ದ ದೋಣಿಯಂತೆ ಇತ್ತು. ಆ ಊರಿನಲ್ಲಿ ಸಿಂಹವಾಹಿನಿ ಎಂಬ ದೇವಸ್ಥಾನವಿತ್ತು. ಊರಿನ ಜನರ

ಮೆಚ್ಚಿನ ದೇವತೆ ಅವಳು. ವರುಷದಲ್ಲಿ ದೇವಿಗೆ ಆಗುತ್ತಿದ್ದ ಉತ್ಸವ ಮುಂತಾದುವು ಜನರಿಗೆಲ್ಲ ಸಂತೋಷದ ದಿನ.

ಆ ಹಳ್ಳಿಯಲ್ಲಿ ರಾಮಚಂದ್ರ ಮುಖರ್ಜಿ ಎಂಬ ಬ್ರಾಹ್ಮಣ ಕುಟುಂಬವಿತ್ತು. ಅವರಿಗೆ ಶ್ಯಾಮಸುಂದರೀ ದೇವಿ ಎಂಬ ಹೆಂಡತಿ. ಇಬ್ಬರೂ ದೈವ ಭಕ್ತರು. ಸರಳ ಜೀವಿಗಳು, ಪರೋಪಕಾರಿಗಳು. ಒಂದು ದಿನ ಶ್ಯಾಮಸುಂದರೀ ದೇವಿ ಜಯರಾಮವಟಿಗೆ ಮೂರು ಮೈಲಿ ದೂರದಲ್ಲಿದ್ದ ಶಿಹೂರ್ ಎಂಬ ಗ್ರಾಮದ ದೇವಸ್ಥಾನಕ್ಕೆ ಹೋಗಿದ್ದರು. ಹಿಂತಿರುಗಿ ಬರುವಾಗ ಸಂಜೆಯಾಯಿತು. ಜಯರಾಮವಟಿಗೆ ಸಮೀಪ ದಲ್ಲಿದ್ದ ಜಾತ್ರ ಸಿದ್ಧಾದೇವಿ ಎಂಬ ದೇವಸ್ಥಾನದ ಹತ್ತಿರ ಇವರು ಕುಳಿತು ಕೊಂಡಿದ್ದರು. ಹತ್ತಿರದಿಂದ ಅತಿಸುಂದರವಾದ ಐದು ವರುಷ ವಯಸ್ಸಿನ ಹುಡುಗಿಯೊಂದು ಬಂದು ಇವರನ್ನು ಅಪ್ಪಿಕೊಂಡಂತೆ ಆಯಿತಂತೆ. ನಾನು ನಿಮ್ಮ ಮನೆಗೆ ಬರುತ್ತೇನೆ ಎಂದು ಅದು ಹೇಳಿದಂತೆ ಇವರಿಗೆ ತೋರಿತು. ನಂತರ ಇವರು ಪ್ರಜ್ಞೆಯಿಲ್ಲದೆ ನೆಲದ ಮೇಲೆ ಬಿದ್ದರು. ಮನೆಗೆ ಕರೆದುಕೊಂಡು ಹೋಗಿ ಉಪಚಾರ ಮಾಡಿದ ಮೇಲೆ ಪ್ರಜ್ಞೆ ಬಂತು.

ಇದಾದ ಕೆಲವು ತಿಂಗಳ ಮೇಲೆ, ೧೮೫೩ ನೇ ಇಸವಿ ಡಿಸೆಂಬರ್ ೨೨ ನೇ ತಾರೀಖು ಶ್ಯಾಮಸುಂದರೀ ದೇವಿಗೆ ಒಂದು ಹೆಣ್ಣು ಶಿಶು ಜನಿಸಿತು. ಶಾರದಾ ದೇವಿ ಎಂದು ಅದಕ್ಕೆ ನಾಮಕರಣ ಮಾಡಿದರು. ಇದೇ ಹಿರಿಯ ಮಗು. ತಂದೆ ತಾಯಿಗಳ ಲಾಲನೆ ಪಾಲನೆಯಲ್ಲಿ ಬೆಳೆಯಿತು.

ಶಾರದೆಗೆ ನಾಲ್ಕನೆ ವರುಷದ ಸಮಯವಾಯಿತು. ತಾಯಿಗೆ ಅನೇಕ ಸಣ್ಣ ಪುಟ್ಟ ಕೆಲಸದಲ್ಲಿ ನೆರವಾಗುತ್ತಿದ್ದಳು. ತಂದೆಯ ಪೂಜೆಗೆ ಹೂವು, ತುಳಸಿ ಮುಂತಾದುವನ್ನು ತಂದುಕೊಡುತ್ತಿದ್ದಳು. ಇತರ ಹುಡುಗರಂತೆ ಜಗಳ ಮುಂತಾದುವಲ್ಲಿ ಭಾಗ ವಹಿಸುತ್ತಿರಲಿಲ್ಲ. ಯಾರಾ ದರೂ ಜಗಳ ಮಾಡಿದರೆ ಇವಳು ರಾಜಿ ಮಾಡಿಸುತ್ತಿದ್ದಳು. ಜೊತೆಯ ಹುಡುಗಿಯರೆಲ್ಲರಿಗೂ ಇವಳಲ್ಲಿ ಒಂದು ಗೌರವ. ಇವರ ಆಟವು ಕೂಡ

ಸಾಧಾರಣ ಹುಡುಗಿಯರ ಆಟದಂತೆ ಇರಲಿಲ್ಲ. ಆಟವೂ ಕೂಡ ಶಿವ ಕಾಳಿ ಮುಂತಾದವರ ಪೂಜೆಗೆ ಸಂಬಂಧಿಸಿತ್ತು. ಚೋಟುದ್ದ ಹುಡುಗಿಯಾಗಿದ್ದರೂ ರಾಣಿಯ ಒಂದು ಗಾಂಭೀರ್ಯ ಇವರ ನಡೆನುಡಿಯಲ್ಲಿ ತೋರುತ್ತಿತ್ತು.

ಜಯರಾಮಪಟಿ, ಕೆಲವು ವೇಳೆ ಬರಗಾಲ, ಕೆಲವು ವೇಳೆ ಪ್ರವಾಹ ಇವುಗಳ ಕೋಟಲೆಗೆ ಸಿಕ್ಕುತ್ತಿತ್ತು. ಒಂದು ಸಲ ಬಂದ ಪ್ರವಾಹದಲ್ಲಿ ಪತ್ತಿರದ ಜಮೀನೆಲ್ಲವೂ ಮುಳುಗಿ ಹೋಗಿತ್ತು. ಶಾರದೆ ಮಂಡಿಯುದ್ದ ನೀರಿಗೆ ಹೋಗಿ ಕುಡಿಗೋಲಿನಿಂದ ಹುಲ್ಲನ್ನು ದನಕ್ಕಾಗಿ ಕೊಯ್ದು ಕೊಂಡು ಬರಬೇಕಾಗಿತ್ತು. ಒಂದು ಸಲ ಬತ್ತದ ತೆನೆಗೆ ಯಾವುದೋ ಒಂದು ರೋಗ ತಗುಲಿತು. ಬೆಳೆಗೆ ತುಂಬಾ ನಷ್ಟವಾಯಿತು. ಕ್ಷಾಮ ಊರಿಗೆ ಕಾಲಿಟ್ಟಿತು. ಆ ಸಮಯದಲ್ಲಿ ಶಾರದೆ ಇತರರೊಂದಿಗೆ ಸಣ್ಣ ಬುಟ್ಟಿಯನ್ನು ತೆಗೆದುಕೊಂಡು ಗದ್ದೆಯಿಂದ ಗದ್ದೆಗೆ ಹೋಗಿ ಕೆಳಗೆ ಬಿದ್ದಿದ್ದ ಬತ್ತದ ಕಾಳನ್ನು ಆರಿಸಿಕೊಂಡು ಬರುತ್ತಿದ್ದಳು. ಅದನ್ನು ಮನೆಗೆ ತಂದು ಕುಟ್ಟಿದ ಮೇಲೆಯೆ ಉಳಿದವರಿಗೆ ಅನ್ನ. ಮತ್ತೊಂದು ಸಲ ಕ್ಷಾಮಗಾಲ ತಲೆದೋರಿತು. ಅಂದಿನ ವರುಷ ಅಕಸ್ಮಾತ್ ರಾಮಚಂದ್ರನ ಮನೆಯಲ್ಲಿ ಎಂದಿಗಿಂತ ಹೆಚ್ಚಾಗಿ ಕಣಜದಲ್ಲಿ ಬತ್ತವಿತ್ತು ಸುತ್ತಲೂ ಹಲವು ಜನ ಉಪವಾಸದಿಂದ ನರಳುವಾಗ ಇವರು ಮಾತ್ರ ಹೊಟ್ಟೆತುಂಬ ತಿನ್ನಲು ಬಯಸಲಿಲ್ಲ. ಹಲವು ಪಾತ್ರೆಯಲ್ಲಿ ಕಿಚಡಿ ಮಾಡಿ ಮನೆಯ ಮುಂದೆ ಇಡುತ್ತಿದ್ದರು. ಯಾರು ಹಸಿದು ಬಂದು ಕೇಳಿದರೂ ಅವರಿಗೆಲ್ಲ ಕೊಡುತ್ತಿದ್ದರು. ಕಿಚಡಿ ಬಿಸಿಯಾಗಿದ್ದರೆ ಅದನ್ನು ಬೀಸಣಿಗೆಯಿಂದ ಬೀಸಿ ಬಂದವರಿಗೆ ಶಾರದೆ ಕೊಡುತ್ತಿದ್ದಳು. ಒಂದು ಸಲ ಶಾರದೆ, ದನಕ್ಕಾಗಿ ಅಕ್ಕಿ ತೊಳೆದ ನೀರಿಗೆ ತವಡನ್ನು ಬೆರಸುತ್ತಿದ್ದಳು. ಆ ಸಮಯಕ್ಕೆ ಸರಿಯಾಗಿ ಹಲವು ದಿನದ ಉಪವಾಸದಿಂದ ನರಳುತ್ತಿದ್ದ ಹೆಂಗಸೊಬ್ಬಳು ಬಂದಳು. ಬಂದೊಡನೆಯೆ ತವಡು ನೀರನ್ನು ಕುಡಿಯಲು ಮೊದಲು ಮಾಡಿದಳು. ಒಳಗೆ ಹೋಗು ಕಿಚಡಿ ಇದೆ ಎಂದರೂ ಅವಳಿಗೆ ಹುಸಿವಿನ ಆತುರದಿಂದ ಕೇಳಿಸಲಿಲ್ಲವಂತೆ!

ಶಾರದೆ ಶಾಲೆಗೆ ಹೋಗುತ್ತಿರಲಿಲ್ಲ. ಕೆಲವು ವೇಳೆ ತನ್ನ ತಮ್ಮಂದಿರನ್ನು ಶಾಲೆಗೆ ಕರೆದುಕೊಂಡು ಹೋಗಿ ಬಿಟ್ಟು ಬರುತ್ತಿದ್ದಳು. ಆಗಿನ ಕಾಲದಲ್ಲಿ ಅದರಲ್ಲಿಯೂ ಹಳ್ಳಿಯ ಕಡೆ ಹುಡುಗಿಯರನ್ನು ಶಾಲೆಗೆ ಕಳುಹಿಸುವ ವಾಡಿಕೆ ಇರಲಿಲ್ಲ. ಆದರೂ ಹಲವಾರು ವಿಷಯಗಳನ್ನು ತಿಳಿದುಕೊಳ್ಳಲು ಅವರಿಗೆ ಬೇಕಾದಷ್ಟು ಅವಕಾಶವಿತ್ತು. ಮನೆಯಲ್ಲಿ ರಾಮಾಯಣ, ಮಹಾಭಾರತ, ಚೈತನ್ಯಭಾಗವತ ಮುಂತಾದುವನ್ನು ಓದುತ್ತಿದ್ದರು. ಶಾರದಾ ದೇವಿಯವರ ತಾಯಿಗೆ ಇವುಗಳೆಲ್ಲ ಕಂಠಪಾಠವಾಗಿ ಹೋಗಿತ್ತು. ಅನೇಕ ವೇಳೆ ಮಗಳಿಗೆ ಇಂತಹ ಕಥೆಗಳನ್ನೆಲ್ಲ ಹೇಳುತ್ತಿದ್ದರು. ಶಾರದಾ ದೇವಿ ದೊಡ್ಡವರಾಗಿ ದಕ್ಷಿಣೇಶ್ವರದಲ್ಲಿದ್ದಾಗ ಸ್ವಲ್ಪ ಓದುವುದನ್ನು ಕಲಿತುಕೊಳ್ಳುತ್ತಿದ್ದರು. ಒಂದು ದಿನ ಶ್ರೀ ರಾಮಕೃಷ್ಣರ ಸೋದರ ಅಳಿಯ ಇದನ್ನು ನೋಡಿ ಅವರು ಕಲಿಯುತ್ತಿದ್ದ ಪುಸ್ತಕವನ್ನು ಗಂಗಾ ನದಿಗೆ ಬಿಸಾಡಿದನಂತೆ. ಹೆಂಗಸರು ಹೀಗೆ ಓದುವುದನ್ನು ಕಲಿತರೆ ಕ್ರಮೇಣ ಕಾದಂಬರಿ ಕಥೆ ಮುಂತಾದುವನ್ನೆಲ್ಲಾ ಓದುವರು. ಇದು ಅವರ ಮಾನಕ್ಕೆ ಚ್ಯುತಿ ತಂದೀತು ಎಂದು ಆ ಮನುಷ್ಯ ತಿಳಿದುಕೊಂಡಿದ್ದ! ಅಂತೂ ಕೊನೆಗೆ ಶಾರದಾ ದೇವಿಯರು ಪ್ರಯತ್ನಪಟ್ಟು ರಾಮಾಯಣ, ಭಾರತ ಮುಂತಾದ ಪುರಾಣವನ್ನು ಓದಿ ತಿಳಿದುಕೊಳ್ಳುವಷ್ಟು ಕಲಿತರು.

ಶಾರದಾ ದೇವಿಯವರಿಗೆ ಐದು ವರುಷ ತುಂಬಿತು. ಆಗ ಹತ್ತಿರವಿದ್ದ ಕಮಾರಪುಕುರದಿಂದ ರಾಮಕೃಷ್ಣರಿಗೆ ಮದುವೆ ಮಾಡುವುದಕ್ಕಾಗಿ ಒಂದು ಹೆಣ್ಣನ್ನು ಹುಡುಕಲು ಬಂದರು. ಶಾರದಾ ದೇವಿಯನ್ನು ಶ್ರೀ ರಾಮಕೃಷ್ಣರಿಗೆ ಕೊಡಲು ಒಪ್ಪಿದರು. ಮದುವೆಗೆ ಎಲ್ಲರೂ ಕಮಾರಪುಕರಕ್ಕೆ ಹೋದರು. ಶ್ರೀ ರಾಮಕೃಷ್ಣರ ತಾಯಿ ಚಂದ್ರಮಣಿ ದೇವಿ, ಪಕ್ಕದ ಶ್ರೀಮಂತರ ಮನೆಯಿಂದ, ತನ್ನ ಮುದ್ದು ಸೊಸೆಗೆ ಇಡುವುದಕ್ಕಾಗಿ, ಚಿನ್ನ ಬೆಳ್ಳಿಯ ಒಡವೆಯನ್ನು ಎರವಲಾಗಿ ತಂದರು. ಮದುವೆಗಾಗಿ ತಂದ ಒಡವೆಯನ್ನು ಹಿಂತಿರುಗಿ ಕೊಡುವ ಸಮಯ ಬಂತು. ಚಂದ್ರಮಣಿ ತನ್ನ ಸೊಸೆಗೆ ಒಡವೆಯನ್ನು ಕೊಡು ಎಂದು ಕೇಳಿದರು. ಆದರೆ

ಶಾರದದೇವಿ ಮದುವೆ ಸಮಯದಲ್ಲಿಟ್ಟ ಒಡವೆ ತನಗೆ ಸೇರಿರಬೇಕು ಎಂದು ಕೊಂಡಿದ್ದರು. ಬಲಾತ್ಕಾರದಿಂದ ಮಗುವನ್ನು ಅಳಿಸಿ ಒಡವೆಯನ್ನು ತೆಗೆದುಕೊಳ್ಳಲು ಬಯಸಲಿಲ್ಲ. ಇದನ್ನು ರಾಮಕೃಷ್ಣರಿಗೆ ತಿಳಿಸಿದರು. ಶ್ರೀ ರಾಮಕೃಷ್ಣರು "ಇದಕ್ಕೆ ಏತಕ್ಕೆ ಇಷ್ಟು ಚಿಂತೆ" ಎಂದರು. ರಾತ್ರಿ ಶಾರದಾ ದೇವಿ ಮಲಗಿದ್ದಾಗ, ಅವರಿಗೆ ಸ್ವಲ್ಪವೂ ಎಚ್ಚರವಾಗ ದಂತೆ ಹುಡುಗಿಯ ಮೈಮೇಲೆ ಇದ್ದ ಒಡವೆಯನ್ನು ಕಳಚಿ ತಾಯಿಯ ಕೈಗೆ ಕೊಟ್ಟರು. ಶಾರದಾ ದೇವಿ ಬೆಳಗ್ಗೆ ಎದ್ದು ನೋಡಿಕೊಂಡಾಗ ಒಡವೆ ಒಂದೂ ಕಾಣಲಿಲ್ಲ. ಅಳ ತೊಡಗಿದಳು. ಇವರ ಅತ್ತೆ ಎತ್ತಿ ಕೊಂಡು ಸಮಾಧಾನ ಮಾಡುತ್ತ "ಶಾರದೆ, ನೀನು ದೊಡ್ಡವಳಾದ ಮೇಲೆ ನನ್ನ ಮಗ ನಿನಗೆ ಬೇಕಾದಷ್ಟು ಒಡವೆ ಮಾಡಿಸಿ ಕೊಡುತ್ತಾನೆ" ಎಂದರು. ಈ ಪ್ರಸಂಗ ಶಾರದಾ ದೇವಿಯವರ ಮನೆಯವರಿಗೆ ತಿಳಿಯಿತು. ಶಾರದಾ ದೇವಿಯವರ ಸೋದರ ಮಾವನಿಗೆ ರೇಗಿತು. ಎಂತಹ ಗಂಡಿನ ಮನೆಯವರು ಎಂದು ಶಾರದಾ ದೇವಿಯನ್ನು ಎತ್ತಿಕೊಂಡು ಜಯರಾಮ ವಟಿಗೆ ಹೊರಟು ಹೋದನು. ಚಂದ್ರಮಣಿ ದೇವಿಗೆ ಮದುವೆ ಹೀಗೆ ಕೊನೆಗೊಂಡಿತಲ್ಲ ಎಂಬ ಚಿಂತೆ. ಶ್ರೀ ರಾಮಕೃಷ್ಣರಿಗೆ ಇದು ಗೊತ್ತಾಯಿತು. "ಹೆಣ್ಣನ್ನು ಕರೆದುಕೊಂಡು ಹೋದರೆ ಏನಂತೆ? ಮಾಡಿರುವ ಮದುವೆಯನ್ನು ರದ್ದು ಮಾಡಲು ಆದೀತೆ" ಎಂದು ನಕ್ಕರು.

ಮದುವೆಯಾದ ಕೆಲವು ದಿನದ ಮೇಲೆ ಶ್ರೀ ರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹೊರಟರು. ಭಗವಂತನನ್ನು ಹಲವು ವಿಧಗಲ್ಲಿ ನೋಡುವ ಪ್ರಚಂಡ ಸಾಧನೆಯಲ್ಲಿ ಮುಳುಗಿದರು. ಅವರಿಗೆ ಆಗ ದೇಹದ ಲಕ್ಷ್ಯವೆ ಇರಲಿಲ್ಲ. ಊಟವನ್ನು ಅವರ ಬಾಯಿಗೆ ಯಾರೊ ತುರುಕ ಬೇಕಾಗಿತ್ತು. ತಲೆಯ ಮೇಲೆ ಹಕ್ಕಿಗಳು ಬಂದು ಗೂಡು ಕಟ್ಟುತ್ತಿದ್ದವು. ಧ್ಯಾನಕ್ಕೆ ಕುಳಿತರೆಂದರೆ ಒಂದು ವಿಗ್ರಹದಂತೆ ಅಚಲರಾಗುತ್ತಿದ್ದರು. ಹೀಗಿರುವಾಗ ಇವರಿಗೆ ಮದುವೆ ಮಾಡಿಕೊಂಡ ಶಾರದಾ ದೇವಿಯ ನೆನಪು ಹೇಗೆ ಬರಬೇಕು. ಪರಮಹಂಸರಿಗೆ ದೇವರ ಮೇಲಿನ ಹುಚ್ಚು ಬಿಡಿಸುವುದಕ್ಕೆ ಶಾರದಾ ದೇವಿಯನ್ನು ಕಟ್ಟಿದರು. ಆದರೆ ಅವರ ಭಕ್ತಿಯ ಓಟವನ್ನು

ಜಿಗಿ ಹಿಡಿಯುವ ಲಗಾಮು ಇರಲಿಲ್ಲ. ಯಾರು ಅದನ್ನು ಜಿಗಿ ಹಿಡಿಯುವುದಕ್ಕೆ ಹೋದರೆ ಅವರನ್ನೇ ಅದು ಎಳೆದುಕೊಂಡು ಹೋಗುತ್ತಿತ್ತು.

ಶಾರದಾ ದೇವಿಗೆ ಹದಿನಾಲ್ಕು ವರುಷವಾದಾಗ ಪರಮಹಂಸರು ಕೆಲವು ಕಾಲ ಕಮಾರಪುಕುರದಲ್ಲಿ ಬಂದು ಇದ್ದರು. ಆಗ ಶಾರದಾ ದೇವಿಯವರು ಕಮಾರಪುಕುರಕ್ಕೆ ಹೋಗಿ ಕೆಲವು ಕಾಲ ಅವರೊಂದಿಗೆ ಕಳೆದರು. ಆಗ ಪರಮಹಂಸರು ಅವರನ್ನು ಬಹಳ ಪ್ರೀತಿಯಿಂದ ಕಾಣು ತ್ತಿದ್ದರು, ದೇವರ ವಿಷಯವಾಗಿ ಹಲವು ವಿಚಾರಗಳನ್ನು ಹೇಳುತ್ತಿದ್ದರು. ಪ್ರಾರ್ಥನೆ, ಧ್ಯಾನ ಮುಂತಾದುವನ್ನು ಹೇಗೆ ಮಾಡಬೇಕೆಂದು ಸಲಹೆ ಯನ್ನು ಕೊಟ್ಟರು.

ಪುನಃ ಶ್ರೀ ರಾಮಕೃಷ್ಣರು ದಕ್ಷಿಣೇಶ್ವರಕ್ಕೆ ಹೊರಟರು. ಕೆಲವು ವರ್ಷಗಳವರೆಗೆ ಶಾರದಾ ದೇವಿಯರಿಗೆ ಅವರಿಂದ ಯಾವ ಸುದ್ದಿಯೂ ಬರಲಿಲ್ಲ. ಇಂದೊ ನಾಳೆಯೊ ಅವರು ಬಂದು ತಮ್ಮನ್ನು ದಕ್ಷಿಣೇಶ್ವರಕ್ಕೆ ಕರೆದುಕೊಂಡು ಹೋಗುವರು ಎಂದು ಬಯಸಿದ್ದರು. ಆದರೆ ದಕ್ಷಿಣೇಶ್ವರ ದಿಂದ ಯಾವ ಕರೆಯೂ ಬರಲಿಲ್ಲ. ಪರಮಹಂಸರು ಹುಚ್ಚರಾಗಿ ಹೋಗಿರುವರು ಎಂಬ ಸುದ್ದಿ ಹರಡಿತು. ಪ್ರಾಪಂಚಿಕ ಜನರು ಇತರರನ್ನು ಅಳೆಯುವ ರೀತಿಯೇ ಒಂದು ವಿಧ. ಯಾರು ತಮ್ಮಂತೆ ಮೃಗೀಯ ಆಸೆಗಳನ್ನು ತೃಪ್ತಿಪಡಿಸಿಕೊಳ್ಳುವುದಕ್ಕೆ ಕಾತುರರಾಗಿಲ್ಲವೋ ಅವರನ್ನು ಹುಚ್ಚರು ಎಂದು ಸಾರುವರು. ಒಂದು ದೃಷ್ಟಿಯಿಂದ ನೋಡಿದರೆ ಪರಮಹಂಸರು ನಂತರ ಹೇಳುತ್ತಿದ್ದಂತೆ ಎಲ್ಲರೂ ಹುಚ್ಚರೆ. ಈ ಜಗತ್ತೇ ಒಂದು ದೊಡ್ಡ ಹುಚ್ಚರ ಆಸ್ಪತ್ರೆ. ಅಲ್ಲಿ ಕೆಲವರು ಕಾಮಿನಿಗಾಗಿ ಹುಚ್ಚರಾಗಿರುವರು, ಕಾಂಚನಕ್ಕಾಗಿ ಕೆಲವರು, ಕೀರ್ತಿಗಾಗಿ ಕೆಲವರು; ಹೀಗೆಯೆ ಹಲವರು ಹಲವು ವಸ್ತುಗಳಲ್ಲಿ ಹುಚ್ಚರಾಗಿ ಹೋಗಿರುವರು. ಆದರೆ ಎಲ್ಲೋ ಕೋಟಿಗೆ ಒಬ್ಬರು ದೇವರಿಗಾಗಿ ಹುಚ್ಚರಾಗಿರುವರು. ದೇವರ ಹುಚ್ಚು ಹಿಡಿದವನು ಮಾತ್ರ ಬೇಗ ಹುಚ್ಚರ ಆಸ್ಪತ್ರೆಯಿಂದ ಪಾರಾಗುವನು. ಉಳಿದವರು ಹಲವು ಜನ್ಮಗಳು ಮತ್ತೆ ಮತ್ತೆ ಬಂದು ಇಲ್ಲಿ ಕೊಳೆಯಬೇಕಾಗುವುದು.

ಪರಮಹಂಸರು ಹುಚ್ಚರಾಗಿ ಹೋಗಿರುವರು ಎಂಬ ಸುದ್ದಿ ಶಾರದಾ ದೇವಿಯವರಿಗೆ ತಲುಪಿತು. ಊರಿನ ಜನರಿಗೆಲ್ಲ ತಿಳಿಯಿತು. ಅವರೆಲ್ಲ ಇವರಿಗೆ ಸಹಾನುಭೂತಿಯನ್ನು ಕೋರುವರೆ ಆದರು. "ಅಯ್ಯೋ! ಶಾರದೆಯಂತಹ ದಿವಿನಾದ ಹೆಣ್ಣನ್ನು ಆ ಗೊಡ್ಡು ಬ್ರಾಹ್ಮಣನಿಗೆ ಕಟ್ಟಿದರಲ್ಲ" ಎಂದು ಸಂತಾಪಪಟ್ಟರು. ಈ ಸುದ್ದಿ ನಿಜವೆ? ಹಾಗೆ ಒಂದು ವೇಳೆ ನಿಜವಾಗಿದ್ದರೆ ಅವರ ಹತ್ತಿರ ಹೋಗಿ ಅವರಿಗೆ ಶುಶ್ರೂಷೆಮಾಡುವುದು ತನ್ನ ಕರ್ತವ್ಯ ಎಂದು ಶಾರದಾ ದೇವಿಯವರು ತಿಳಿದರು. ದಕ್ಷಿಣೇಶ್ವರಕ್ಕೆ ಹೋಗಲು ಒಂದು ಸಮಯ ಕಾಯುತ್ತಿದ್ದರು.

ಜಯರಾಮವಟಿಯಿಂದ ಚೈತ್ರ ಪೂರ್ಣಿಮೆಯ ಸಮಯದಲ್ಲಿ ಗಂಗಾಸ್ನಾನ ಮಾಡಬೇಕೆಂದು ಯಾತ್ರಿಕರ ಗುಂಪು ಹೊರಟಿತು. ಇವರ ಜೊತೆಗೆ ಶಾರದಾ ದೇವಿಯವರು ಮತ್ತು ಅವರ ತಂದೆಯವರು ಸೇರಿದರು. ಎಲ್ಲರೂ ನಡೆದುಕೊಂಡು ಹೊರಟರು. ಎರಡು ದಿನ ನಡೆದು ಸಾಕಾಗಿ ಶಾರದಾ ದೇವಿಯವರಿಗೆ ಜ್ವರ ಬಂದಿತು. ಹತ್ತಿರ ಇದ್ದ ಒಂದು ಹಳ್ಳಿಯಲ್ಲಿ ತಂಗಿದರು. ಅಂದಿನ ರಾತ್ರೆ ಇವರು ಮಲಗಿದ್ದಾಗ ಇವರಿಗೊಂದು ಕನಸಾಯಿತು: ಯಾರೊ ಕಪ್ಪಾದ ಅತಿ ಸುಂದರ ಹೆಂಗಸೊಬ್ಬರು ಇವರ ಹತ್ತಿರ ಬಂದು ಕುಳಿತುಕೊಂಡು ತನ್ನ ಕೈಗಳನ್ನು ಇವರ ತಲೆಯ ಮೇಲೆ ಇಟ್ಟಳು. ಶಾರದ ದೇವಿಯವರು ಜ್ವರದ ತಾಪದಿಂದ ಪರಿತಪಿಸುತ್ತಿದ್ದರು. ಇವರ ಕೈ ಸೋಂಕಿನಿಂದ ಶಾಖ ತಗ್ಗಿತು. ಮನಸ್ಸಿಗೆ ಯಾವುದೊ ಒಂದು ಶಾಂತಿ ಬಂದಿತು. "ನೀನು ಎಲ್ಲಿಂದ ಬರುತ್ತೀಯೆ?" ಎಂದು ಶಾರದಾ ದೇವಿಯರು ಕೇಳಿದರು. ಆಕೆ "ನಾನು ದಕ್ಷಿಣೇಶ್ವರದಿಂದ ಬರುವೆನು" ಎಂದಳು. ಶಾರದಾ ದೇವಿಯವರು "ನಾನೂ ಅಲ್ಲಿಗೆ ಹೊರಟೆ. ಅಲ್ಲ ನನ್ನವರು ಇರುವರು. ಆದರೆ ಜ್ವರ ಬಂದು ಇಲ್ಲಿ ಮಲಗಬೇಕಾಯಿತು" ಎಂದರು. ಅದಕ್ಕೆ "ನಾನು ನಿನಗಾಗಿ ರಾಮಕೃಷ್ಣರನ್ನು ಅಲ್ಲಿ ಇಟ್ಟಿರುವೆ. ನಾಳೆ ಗುಣಮುಖವಾಗುವೆ" ಎಂದು ಹೇಳಿ ವ್ಯಕ್ತಿ ಮಾಯವಾಯಿತು.

ಮೂರನೆ ದಿನ ಏಳುವ ಹೊತ್ತಿಗೆ ಇವರಿಗೆ ಜ್ವರ ಬಿಟ್ಟಿತ್ತು. ನೆನ್ನೆಯ ಕನಸು ಅವರ ಮನಸ್ಸಿಗೆ ಒಂದು ಹರುಷ ಕೊಟ್ಟಿತ್ತು. ಮನಸ್ಸಿನ ದುಗುಡವನ್ನು ಪರಿಹರಿಸಿತ್ತು. ನಿಧಾನವಾಗಿ ನಡೆದು ರಾತ್ರಿ ಹತ್ತು ಗಂಟೆಯ ಹೊತ್ತಿಗೆ ದಕ್ಷಿಣೇಶ್ವರವನ್ನು ಸೇರಿದರು. ಪರಮ ಹಂಸರಿಗೆ ಇವರನ್ನು ನೋಡಿದೊಡನೆಯೆ ತಮ್ಮ ಸತಿ ಎಂದು ಗೊತ್ತಾ ಯಿತು. ಅವರನ್ನು ಒಂದು ಚಾಪೆಯ ಮೇಲೆ ಕುಳಿತುಕೊಳ್ಳುವಂತೆ ಹೇಳಿದರು. ಇವರ ಜತೆಗೆ ಮಲಗುವುದಕ್ಕೆ ಒಬ್ಬ ಪರಿಚಾರಕಿಯನ್ನು ಬರಹೇಳಿದರು. ಮೂರನೆಯ ದಿನ ವೈದ್ಯರನ್ನು ಕರೆದು ಇವರಿಗೆ ಔಷಧಿ ಕೊಡಿಸಿದರು. ಕೆಲವು ದಿನಗಳಲ್ಲಿ ಗುಣವಾದ ಮೇಲೆ ಹತ್ತಿರದಲ್ಲೆ ಇದ್ದ ಒಂದು ಸಣ್ಣ ಕೋಣೆಗೆ ರಾಮಕೃಷ್ಣರ ತಾಯಿಯೊಂದಿಗೆ ಇರಲು ಹೋದರು.

ಪರಮಹಂಸರು ಶ್ರೀ ಶಾರದಾ ದೇವಿಯವರನ್ನು ಮದುವೆ ಯಾದುದರಿಂದ ಅವರಿಗೆ ವಿರುದ್ಧವಾಗಿ ಏನನ್ನೂ ಮಾಡಬಯಸಲಿಲ್ಲ. ಒಂದು ದಿನ ಶಾರದಾ ದೇವಿಯವರೊಂದಿಗೆ ಇವರು ಹೀಗೆ ಹೇಳಿದರು: "ನೀನು ನನ್ನನ್ನು ಮದುವೆಯಾಗಿರುವೆ. ನನಗೆ ಜಗದ ಹೆಂಗಸರೆಲ್ಲರೂ ಜಗನ್ಮಾಯಿಯ ಪ್ರತಿಬಿಂಬದಂತೆ ಕಾಣುವರು. ಆದರೂ ನೀನು ಸಾಧಾರಣ ಜನರಂತೆ ಪ್ರಾಪಂಚಿಕ ಸುಖವನ್ನು ಬಯಸಿದರೆ ನಾನು ಅದಕ್ಕೆ ಸಿದ್ಧವಾ ಗಿರುವೆನು."

ಏನಾದರೂ ಶಾರದಾ ದೇವಿಯವರು ಹಾಗೆ ಇಚ್ಛಿಸಿದ್ದರೆ ಜಗತ್ತು ರಾಮಕೃಷ್ಣರೆಂಬ ಅವತಾರ ವ್ಯಕ್ತಿಯನ್ನು ಕಾಣುತ್ತಿರಲಿಲ್ಲ. ಆದರೆ ಶಾರದಾ ದೇವಿಯವರು ತಪೋಧನರನ್ನು ಕೈಹಿಡಿದ ತಪಸ್ವಿನಿ. ಅವರಿಗೆ ಸರಿಸಮಾನವಾದ ಮಾತನ್ನೇ ಆಡಿದರು. "ನಾನೇಕೆ ನಿಮ್ಮನ್ನು ಕೆಳಗೆ ಇಳಿಸಲಿ. ನಿಮ್ಮನ್ನು ಸೇವಿಸುವ ಪುಣ್ಯ ಸಿಕ್ಕಿದರೆ ನಾನು ಕೃತಾರ್ಥಳು" ಎಂದರು.

ಶ್ರೀ ರಾಮಕೃಷ್ಣ ಮತ್ತು ಶಾರದಾ ದೇವಿಯವರು ಅಂದಿನಿಂದ ಆಜನ್ಮ ಬ್ರಹ್ಮಚರ್ಯ ವ್ರತವನ್ನು ಧಾರಣೆಮಾಡಿದರು. ಪರಮಹಂಸರು

ಶಾರದಾ ದೇವಿಯ ಆಧ್ಯಾತ್ಮಿಕ ಜವಾಬ್ದಾರಿಯನ್ನು ವಹಿಸಿಕೊಂಡರು. ಆತ್ಮಾನುಭವದ ಶಿಖರದವರೆಗೂ ಇವರನ್ನು ಕರೆದುಕೊಂಡು ಹೋದರು. ತಮ್ಮ ನಂತರ ಬರುವ ಭವಜೀವಿಗಳ ಉದ್ಧಾರಕ್ಕಾಗಿ ಶಾರದಾ ದೇವಿಯ ವರನ್ನು ಅಣಿ ಮಾಡಿದರು.

ಪರಮಹಂಸರು ಇರುವ ತನಕ ಶಾರದಾ ದೇವಿಯವರ ಜೀವನ ಧ್ಯಾನ ಮತ್ತು ಪತಿಸೇವೆಯಲ್ಲಿ ಕಳೆಯುತ್ತಿತ್ತು. ಬೆಳಗ್ಗೆ ಮೂರು ಗಂಟೆ ಸಮಯದಲ್ಲಿ ಎದ್ದು ಗಂಗಾನದಿಯಲ್ಲಿ ಮಿಂದು ಧ್ಯಾನಕ್ಕೆ ಕುಳಿತು ಕೊಳ್ಳುವರು. ಬೆಳಕು ಹರಿದ ಮೇಲೆ ಪರಮಹಂಸರ ಊಟ ಉಪಚಾರಕ್ಕೆ ಅಣಿ ಮಾಡುತ್ತಿದ್ದರು. ಪರಮಹಂಸರು ಪ್ರಖ್ಯಾತರಾದ ಮೇಲೆ ಇವರನ್ನು ನೋಡಲು ಬರುವ ಭಕ್ತರ ತಂಡ ಹೆಚ್ಚಾಯಿತು. ಅವರಿಗೆ ಅನೇಕ ವೇಳೆ ಅಡಿಗೆ ಮಾಡಬೇಕಾಗಿತ್ತು. ಶಾರದಾ ದೇವಿಯವರು ಇದ್ದದ್ದು ಹತ್ತಿರದ ಸಣ್ಣ ಕೋಣೆಯಲ್ಲಿ. ಅದೇ ಉಗ್ರಾಣ, ಅಡಿಗೆ ಮನೆ, ಮತ್ತು ಮಲಗಿಕೊಳ್ಳುವ ಮನೆಯಾಗಿತ್ತು. ಪರಮಹಂಸರ ಸ್ತ್ರೀ ಭಕ್ತರು ಬಂದಾಗ ಶಾರದಾ ದೇವಿಯವರು ಆ ಕೋಣೆಯಲ್ಲಿ ಅವರಿಗೆ ಮಲಗಿಕೊಳ್ಳಲು ಸ್ವಲ್ಪ ಸ್ಥಳವನ್ನು ಒದಗಿಸಬೇಕಾಗಿತ್ತು. ಪರಮಹಂಸರ ದರ್ಶನವಾದ ಮೇಲೆ ಕಲವು ಸ್ತ್ರೀ ಭಕ್ತರು ಶಾರದಾ ದೇವಿಯವರನ್ನು ನೋಡಲು ಬರುತ್ತಿದ್ದರು. ಇವರಿದ್ದ ಸಣ್ಣ ಕೋಣೆಯನ್ನು ನೋಡಿ "ಅಯ್ಯೋ; ನಮ್ಮ ಶಾರದೆ ಸೀತೆ ಅಶೋಕ ವನದಲ್ಲಿ ಇದ್ದಂತೆ ಇರುವ ಳಲ್ಲಾ" ಎಂದುಕೊಂಡು ಹೋಗುತ್ತಿದ್ದರಂತೆ!

ಸಂಜೆ ದೇವಸ್ಥಾನದಲ್ಲಿ ಮಂಗಳಾರತಿ ಆದ ಮೇಲೆ ಪುನಃ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದರು. ಕೆಲವು ವೇಳೆ ಆಕಾಶದಲ್ಲಿ ಬೆಳಗು ತ್ತಿದ್ದ ಚಂದ್ರನನ್ನು ನೋಡಿ ಅದರಂತೆಯೆ ಶುಭ್ರವಾಗಲಿ ನನ್ನ ಮನಸ್ಸು. ಆತನಲ್ಲಿ ಕೂಡ ಸ್ವಲ್ಪ ಕಳಂಕವಿದೆ. ಅದು ಕೂಡ ನನ್ನಲ್ಲಿ ಇಲ್ಲದಿರಲಿ ಎಂದು ಪ್ರಾರ್ಥಿಸುವರು.

ಸಾಧಾರಣ ಮಾನವನಿಗೆ ಸತಿಪತಿಯರಲ್ಲಿ ದೈಹಿಕ ಸಂಬಂಧ ಇಲ್ಲದೇ ಇದ್ದರೆ ಪ್ರೀತಿ ಇರಬಹುದು ಎಂದು ತಿಳಿಯುವುದು ಕಷ್ಟ.

ಆದರೆ ನಿಜವಾದ ಪ್ರೀತಿ ನೋಡಬೇಕಾದರೆ ಎಲ್ಲಿ ದೇಹ ಸಂಬಂಧ ದೂರ ವಾಗಿದೆಯೊ ಅಲ್ಲಿ ಮಾತ್ರ. ಪರಮಹಂಸರು ಮತ್ತು ಶಾರದಾ ದೇವಿ ಯವರ ಜೀವನ ಇಂತಹ ಕಾಮಗಂಧ ಹೀನವಾದ ಪ್ರೀತಿಗೆ ಸಾಕ್ಷಿ ಯಾಗಿದೆ.

ಪರಮಹಂಸರು ಜಗನ್ಮಯಿಯೇ ಶಾರದಾ ದೇವಿಯಂತೆ ಇರುವಳು ಎಂದು ತಿಳಿದುಕೊಂಡಿದ್ದರು. ಆದಕಾರಣವೆ ಅವರು ದೇವಿಯ ಪೀಠದ ಮೇಲೆ ಸತಿಯನ್ನೇ ಕುಳ್ಳಿರಿಸಿ ಪೂಜೆಮಾಡಿ ಪುಷ್ಪಾಂಜಲಿಯನ್ನು ಅರ್ಪಿ ಸಿದರು. ಒಂದು ದಿನ ಶಾರದಾದೇವಿಯವರು ಪರಮಹಂಸರ ಕಾಲನ್ನು ಒತ್ತುತ್ತಿದ್ದರು. ಆಗ ಶಾರದಾದೇವಿಯವರು ಪರಮಹಂಸರನ್ನು "ನೀವು ನನ್ನನ್ನು ಹೇಗೆ ಕಾಣುತ್ತೀರಿ?" ಎಂದು ಕೇಳಿದರು. ಅದಕ್ಕೆ ಪರಮ ಹಂಸರು, "ಯಾವ ದೇವಿ ದೇವಮಂದಿರದಲ್ಲಿ ಇರುವಳೋ ಅವಳೇ ಶಾರದೆಯಂತೆ ನನ್ನ ಕಾಲನ್ನು ಒತ್ತುತ್ತಿರುವಳು" ಎಂದರು.

ಶಾರದಾ ದೇವಿಯವರನ್ನು ಒಂದು ಸಾರಿಯಾದರೂ ಪರಮ ಹಂಸರು ಏಕವಚನದಿಂದ ಕರೆದವರಲ್ಲ. ಒಂದು ದಿನ ಸಂಜೆ ಪರಮ ಹಂಸರು ಕೋಣೆಯಲ್ಲಿ ಕುಳಿತಿದ್ದಾಗ ಬಾಗಿಲು ಸದ್ದಾಯಿತು. ಗುಡಿಯ ಪರಿಚಾರಿಕೆ ಇರಬಹುದು ಎಂದು ಪರಮಹಂಸರು ತಿಳಿದು ಬಾಗಿಲನ್ನು ಮುಚ್ಚು ಎಂದು ಏಕವಚನದಲ್ಲಿ ಹೇಳಿದರು. ಹಿಂದೆ ತಿರುಗಿ ನೋಡಿದಾಗ ಶಾರದಾ ದೇವಿಯವರಾಗಿದ್ದರು. "ತಿಳಿಯದೆ ಏಕವಚನವನ್ನು ಉಪ ಯೋಗಿಸಿದೆ ಕ್ಷಮಿಸು" ಎಂದು ಕೇಳಿಕೊಂಡರು. ಪರಮಹಂಸರಿಗೆ ಅಂದಿನ ರಾತ್ರಿಯಲ್ಲಿ ನಿದ್ದೆ ಬರಲಿಲ್ಲವಂತೆ. ಒರಟು ಮಾತಿನಿಂದ ಶಾರದಾ ದೇವಿಯರಿಗೆ ಎಷ್ಟು ವ್ಯಥೆಯಾಗಿರಬಹುದು ಎಂಬ ಕೊರತೆ. ಬೆಳಿಗ್ಗೆ ಅಷ್ಟು ಹೊತ್ತಿಗೇ ಎದ್ದು ಹೋಗಿ "ನಿನ್ನೆ ಹೇಳಿದ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ, ನಾನು ತಿಳಿಯದೆ ಹಾಗೆ ಹೇಳಿದೆ" ಎಂದರು.

ಮತ್ತೊಂದು ಸಾರಿ ಯಾವುದೋ ಒಂದು ಮಾತಿಗೆ ಶಾರದಾ ದೇವಿಯವರ ಕಣ್ಣಿನಲ್ಲಿ ನೀರು ಬಂದಿತು. ಅವರು ಹಿಂತಿರುಗಿ ಹೋಗು ತ್ತಿದ್ದರು. ಪರಮಹಂಸರು ಇದನ್ನು ನೋಡಿ ಹತ್ತಿರವಿದ್ದ ಶಿಷ್ಯನನ್ನು

ಕರೆದು ' ಆಕೆಯನ್ನು ಕರೆಯಿರಿ. ಆಕೆಯ ಕಣ್ಣಿನಿಂದ ನೀರು ತೊಟ್ಟಿಕ್ಕಿದರೆ ನನ್ನ ವೈರಾಗ್ಯವೆಲ್ಲ ಹಾರಿ ಹೋಗುವುದು " ಎಂದರು. ಕಾಮಹೀನ ವಾದರೂ ಸತಿಯ ಮೇಲೆ ಅವರಿಗೆ ಇದ್ದ ಪ್ರೇಮ ಎಷ್ಟು ಆಳವಾದುದು ಎಂಬುದನ್ನು ಊಹಿಸಬಹುದು.

ಪರಮಹಂಸರು ಮತ್ತು ಶಾರದಾ ದೇವಿಯವರು ಇದ್ದದ್ದು ಇಪ್ಪತ್ತು ಗಜಗಳ ದೂರದಲ್ಲಿ. ಆದರೂ ಶಾರದಾ ದೇವಿಯವರು ಅವರನ್ನು ನೋಡುತ್ತಿದ್ದುದು ಪರಮಹಂಸರಿಗೆ ಊಟವನ್ನು ತೆಗೆದುಕೊಂಡು ಹೋದಾಗ ಮಾತ್ರ. ಕೆಲವು ವೇಳೆ ಯಾರಾದರೂ ಸ್ತ್ರೀ ಭಕ್ತರು ಬಂದರೆ, ಅವರೇ ತೆಗೆದುಕೊಂಡು ಹೋಗುತ್ತಿದ್ದರು. ಅಂತಹ ಸಮಯ ದಲ್ಲಿ ಪತಿಯ ದರ್ಶನಕ್ಕೆ ಹಲವು ತಿಂಗಳು ಬೇಕಾಗಿತ್ತು. ಪತಿಯನ್ನು ಪ್ರತಿದಿನವೂ ನೋಡುವ ಅದೃಷ್ಟ ನನಗೆ ಇದೆಯೆ ಎಂದುಕೊಳ್ಳುತ್ತಿದ್ದರು. ಒಬ್ಬರನ್ನು ಒಬ್ಬರು ಪದೇ ಪದೇ ನೋಡುತ್ತಿರಲಿಲ್ಲವೆಂದರೆ ಪ್ರೀತಿ ಇರಲಿಲ್ಲ ಎಂದು ಭಾವಿಸಬಾರದು. ಒಂದು ಸಲ ಶಾರದಾ ದೇವಿಯವರಿಗೆ ತಲೆನೋವು ಬಂದಿತು. ಪರಮಹಂಸರು ಇದನ್ನು ಕೇಳಿ ಅವರಿಗೆ ತಲೆ ನೋವು ಹೇಗಿದೆ ತಿಳಿದುಕೊಂಡು ಬಾ ಎಂದು ಶಿಷ್ಯರನ್ನು ಹಲವು ಬಾರಿ ಕಳುಹಿಸಿದರು. ಅವರಿಗೆ ತಲೆನೋವು ಬರುವುದಕ್ಕೆ ಕಾರಣವೇನು ಇರ ಬಹುದು ಎಂದು ತುಂಬಾ ಕಾತರಿಸಿದರು.

ಪರಮಹಂಸರು ಮಧ್ಯೆ ಮಧ್ಯೆ ಅವರೊಂದಿಗೆ ಹಾಸ್ಯ ಮಾಡು ತ್ತಿದ್ದರು. ಶಾರದಾ ದೇವಿಯವರಿಗೆ ತಾವು ಎಷ್ಟು ಹತ್ತಿರದವರು ಎಂಬು ದನ್ನು ತೋರಿಸುತ್ತಿದ್ದರು. ಒಂದುಸಲ ಪರಮಹಂಸರಿಗೆ ಶಾರದಾದೇವಿ ಮತ್ತು ಲಕ್ಷ್ಮೀದೀದಿ ಎಂಬ ಮತ್ತೊಬ್ಬ ಹೆಂಗಸರು ಅಡಿಗೆ ಮಾಡಿ ಬಡಿ ಸಿದರು. ಮತ್ತೊಬ್ಬ ಹೆಂಗಸು ಪಾಕಶಾಸ್ತ್ರದಲ್ಲಿ ನಿಪುಣೆ. ಶಾರದಾ ದೇವಿಯವರಿಗೆ ಅಷ್ಟು ಪ್ರವೀಣತೆ ಇರಲಿಲ್ಲ. ಮತ್ತೊಬ್ಬ ಹೆಂಗಸು ಮಾಡಿದ ಅಡಿಗೆಯನ್ನು ರುಚಿನೋಡಿ " ಇದನ್ನು ಮಾಡಿದವರನ್ನು ಕಲ್ಕ ತ್ತೆಯಲ್ಲಿ ಇರುವ ವೈದ್ಯಪ್ರವೀಣ ರಾಮದಾಸನಿಗೆ ಹೋಲಿಸಬಹುದು " ಎಂದರು. ಶಾರದಾ ದೇವಿಯವರ ಅಡಿಗೆಯನ್ನು ರುಚಿ ನೋಡಿ " ಇದನ್ನು

ಶ್ರೀನಾಥನೆಂಬ ಅಳಲೇಕಾಯಿ ಪಂಡಿತನಿಗೆ ಹೋಲಿಸಬಹುದು" ಎಂದು ನಕ್ಕರು. ಹತ್ತಿರದಲ್ಲಿದ್ದ ಹೃದಯ "ನನಗೆ ಪ್ರವೇಶ ಯಾವಾಗಲೂ ಅಡಿಗೆ ಮಾಡುವುದಕ್ಕೆ ಸಿಕ್ಕುವುದಿಲ್ಲ. ಶಾರದಾದೇವಿಯವರಿಗೆ ಚೆನ್ನಾಗಿ ಅಡಿಗೆ ಮಾಡಲು ಗೊತ್ತಿಲ್ಲದೆ ಇರಬಹುದು. ಆದರೆ ಅವರನ್ನು ಕಾಲು ಒತ್ತು, ಎಣ್ಣೆ ಸವರು ಎಂಬ ಕೆಲಸಕ್ಕೆ ಬೇಕಾದರೂ ಕರೆಯಬಹುದು. ಕೂಗುವುದೆ ತಡ ನಾನಿರುವೆನೆಂದು ಓಡಿ ಬರುವರು" ಎಂದು ಹಾಸ್ಯವಾಗಿ ಉತ್ತರ ಕೊಟ್ಟನು. ಪರಮಹಂಸರು ನಗುತ್ತ "ಹೌದು, ಹೌದು, ಅದೇನೊ ನಿಜ" ಎಂದರು.

ಮತ್ತೊಂದು ಸಲ ಪರಮಹಂಸರಿಗೂ ಮತ್ತು ಅವರ ಶಿಷ್ಯರಿಗೂ ಯಾರ ದೇಹ ಹೆಚ್ಚು ಬಿಳುಪು ಎಂಬ ಹಾಸ್ಯ ಪ್ರಸಂಗ ಬಂದಿತು. ಶ್ರೀರಾಮಕೃಷ್ಣರು ಶಾರದಾ ದೇವಿಯವರ ಹತ್ತಿರ ಹೋಗಿ "ನೀನೇ ನೋಡಿ ಹೇಳು ಯಾರು ಹೆಚ್ಚು ಬಿಳುಪು" ಎಂದರು. ಅನಂತರ ಒಬ್ಬರಾದ ಮೇಲೆ ಒಬ್ಬರು ಶಾರದಾ ದೇವಿಯವರಿಗೆ ಕಾಣುವಂತೆ ನಿಂತು ಹೋದರು. ಶಾರದಾ ದೇವಿಯವರು ಶಿಷ್ಯನ ಬಣ್ಣವೆ ಸ್ವಲ್ಪ ಹೆಚ್ಚು ಬಿಳುಪು ಎಂದು ತೀರ್ಪುಕೊಟ್ಟರು.

ಪರಮಹಂಸರು ಮದುವೆ ಸಮಯದಲ್ಲಿ ಶಾರದಾದೇವಿಯವರಿಗೆ ಇಟ್ಟ ನಗವನ್ನೆಲ್ಲ ಅವರು ಮಲಗಿದ್ದಾಗ ತಾವೇ ತೆಗೆದುಕೊಟ್ಟ ಜ್ಞಾಪಕ ವಿತ್ತು. ಆಗ ಅವರ ತಾಯಿ ಚಂದ್ರಮಣಿದೇವಿ ಅಳುತ್ತಿದ್ದ ಶಾರದೆಯನ್ನು ಎತ್ತಿಕೊಂಡು ನೀನು ದೊಡ್ಡವಳಾದ ಮೇಲೆ ನನ್ನ ಮಗ ನಿನಗೆ ಬೇಕಾದಷ್ಟು ಒಡವೆ ಮಾಡಿಸಿ ಹಾಕುವನು ಎಂದು ಹೇಳಿದ್ದರು. ಆದರೆ ಇಂದಿನ ವರೆವಿಗೆ ಶಾರದಾ ದೇವಿಯವರಿಗೆ ಅಂತಹ ಒಡವೆಗಳನ್ನು ಮಾಡಿಸಿ ಹಾಕಿರಲಿಲ್ಲ. ಮದುವೆ ಸಮಯದಲ್ಲಿ ಇಟ್ಟ ಕೆಲವು ಸಣ್ಣ ಒಡವೆ ಅಲ್ಲದೆ ಮತ್ತೆ ಏನೂ ಇರಲಿಲ್ಲ. ಒಂದು ಸಲ ಪರಮಹಂಸರ ಭಕ್ತನಾದ ಮಾರ್ವಾಡಿಯೊಬ್ಬನು ಬಂದು ಪರಮಹಂಸರಿಗಾಗಿ ಬ್ಯಾಂಕಿನಲ್ಲಿ ಹತ್ತು ಸಾವಿರ ರೂಪಾಯಿಯನ್ನು ಇಡುತ್ತೇನೆ ಎಂದನು. ಇದನ್ನು ಕೇಳಿ ದೊಡನೆಯೆ ಪರಮಹಂಸರಿಗೆ ಒಂದು ಸಿಡಿಲು ಹೊಡೆದಂತೆ ಆಯಿತು.

'ನನ್ನನ್ನು ದುಡ್ಡಿನ ಬಲೆಯಲ್ಲಿ ಕೆಡವಬೇಡ. ನೋಡು, ಬೇಕಾದರೆ ಶಾರದಾ ದೇವಿಯವರ ಹತ್ತಿರ ಹೋಗು. ನನ್ನಂತಹ ದರಿದ್ರನನ್ನು ಮದುವೆಯಾಗಿ ಅವರಿಗೆ ಯಾವ ಒಡವೆ ಸೀರೆಯೂ ಇಲ್ಲ. ಅವರು ಇಷ್ಟಪಟ್ಟರೆ ದುಡ್ಡನ್ನು ತೆಗೆದುಕೊಳ್ಳಲಿ" ಎಂದರು. ಮಾರ್ವಾಡಿಯು ಶಾರದಾ ದೇವಿಯವರ ಹತ್ತಿರ ಹೋಗಿ ಕೇಳಿದನು. ಶಾರದಾ ದೇವಿಯವರು "ನಾನು ತೆಗೆದುಕೊಂಡರೂ ಒಂದೆ, ಅವರು ತೆಗೆದುಕೊಂಡರೂ ಒಂದೆ. ನಾನು ತೆಗೆದುಕೊಂಡರೂ ಅವರ ಖರ್ಚಿಗೆ ಉಪಯೋಗಿಸಬೇಕಾಗುವುದು; ಬೇಡ" ಎಂದರು. ಇದನ್ನು ಪರಮಹಂಸರು ತಿಳಿದು ತುಂಬಾ ಸಂತೋಷ ಪಟ್ಟರು.

ಪರಮಹಂಸರು ದಕ್ಷಿಣೇಶ್ವರದಲ್ಲಿ ಪೂಜೆಮಾಡದೆ ಇದ್ದರೂ, ಅವರಿಗೆ ತಿಂಗಳಿಗೆ ಏಳು ರೂಪಾಯಿಯನ್ನು ರಾಣಿ ರಾಸಮಣಿಯ ಮನೆಯವರು ಕೊಡುತ್ತಿದ್ದರು. ಅದನ್ನೆಲ್ಲ ಕೋಣೆಯಲ್ಲಿದ್ದ ಒಂದು ಪೆಟ್ಟಿಗೆಯಲ್ಲಿ ಹಾಕುತ್ತಿದ್ದರು. ಒಂದು ದಿನ ಭಕ್ತನೊಬ್ಬನನ್ನು ಕರೆದು "ಅಲ್ಲಿ ಎಷ್ಟು ದುಡ್ಡು ಇದೆ ನೋಡು" ಎಂದರು. ಸುಮಾರು ಇನ್ನೂರು ರೂಪಾಯಿ ಇತ್ತು. ಅದನ್ನು ತೆಗೆದುಕೊಂಡು ಹೋಗಿ ಪೇಟೆಯಿಂದ ಎರಡು ಚಿನ್ನದ ಬಳೆ ತಂದು ಶಾರದಾ ದೇವಿಗೆ ಕೊಡು ಎಂದರು. ಸಕಲ ವಿದ್ಯೆಯ ಅಧಿ ದೇವತೆಯಾದ ಶಾರದೆಯೆ ಈ ರೂಪಿನಲ್ಲಿ ಇರುವಳು. ಅವಳು ಸಂತೋಷಪಟ್ಟರೆ ಜಗನ್ಮಾಯಿ ಸಂತೋಷ ಪಟ್ಟಂತೆ ಎಂದು ಹೇಳಿದರು. ಹೊರಲಾರದಷ್ಟು ನಗನಾಣ್ಯಗಳನ್ನು ಗಂಡಂದಿರು ಹೆಂಡತಿಯರಿಗೆ ಮಾಡಿಸಿ ಕೊಡುವರು. ಆದರೆ ಎಷ್ಟು ಮಂದಿ ಇಂತಹ ದಿವ್ಯ ದೃಷ್ಟಿಯಿಂದ ಇದನ್ನು ಮಾಡಬಲ್ಲರು!

ಶ್ರೀ ಶಾರದಾ ದೇವಿಯವರು ದಕ್ಷಿಣೇಶ್ವರದಲ್ಲಿ ಇದ್ದಾಗ ಹನ್ನೊಂದು ಸಲ ತವರು ಮನೆಗೆ ಹೋಗಿ ಬಂದರು. ಒಂದು ಸಲ ಪರಮಹಂಸರಿಗೆ ಆಮಶಂಕೆ ಬಂದು ತುಂಬಾ ನಿತ್ರಾಣರಾದರು. ಶುಶ್ರೂಷೆ ಮಾಡಿ ಚೇತರಿಸಿಕೊಂಡ ಮೇಲೆ ಶಾರದಾ ದೇವಿಯವರು ಜಯರಾಮವಟಿಗೆ ಹೊರಟರು. ಅಲ್ಲಿ ಇವರಿಗೂ ಆಮಶಂಕೆ ತಗಲಿತು. ತುಂಬಾ

ನಿಶ್ಪ್ರಾಣರಾದರು. ಇವರ ಪ್ರಾಣ ಉಳಿಯುವುದೆ ಎಂಬ ಸಂದೇಹ ವಾಯಿತು. ಇದು ಪರಮಹಂಸರಿಗೆ ತಿಳಿದು "ಅಯ್ಯೋ ಭಗವಂತನನ್ನು ನೋಡುವುದಕ್ಕೆ ಮುಂಚೆ ಇವಳು ಸತ್ತುಹೋಗಬೇಕಾಗುವುದೆ" ಎಂದು ದುಃಖಪಟ್ಟರು. ಶಾರದಾ ದೇವಿಗೆ ಔಷಧದಿಂದ ಗುಣಮುಖವಾಗದೆ ಇರಲು ಆ ಊರಿನಲ್ಲಿದ್ದ ಸಿಂಹವಾಹಿನಿ ದೇವಾಲಯಕ್ಕೆ ಹೋಗಿ ಪ್ರಾರ್ಥನೆಯಲ್ಲಿ ಕಳೆದರು. ಅವರಿಗೆ ದೇವಿ ಪ್ರತ್ಯಕ್ಷಳಾಗಿ ಯಾವುದೊ ಔಷಧಿಯನ್ನು ಹೇಳಿ ಅದೃಶ್ಯಳಾದಳಂತೆ. ಅದರಂತೆ ಮಾಡಲು ಇವರು ಗುಣಮುಖರಾದರು.

ಮತ್ತೊಂದು ಸಲ ಇವರು ಜಯರಾಮಪಟಿಯಿಂದ ದಕ್ಷಿಣೇಶ್ವರಕ್ಕೆ ಹಲವು ಪ್ರಯಾಣಿಕರೊಂದಿಗೆ ಹಿಂತಿರುಗುತ್ತಿದ್ದರು. ಮಧ್ಯೆ ಒಂದು ಕಾಡಿನ ಮೂಲಕವಾಗಿ ಹೋಗಬೇಕಾಗಿತ್ತು. ಅಲ್ಲಿ ಕಳ್ಳಕಾಕರ ಭಯ. ಜತೆಯಲ್ಲಿ ಇದ್ದವರು ಕಾಡನ್ನು ಸಂಜೆಗೆ ಮುಂಚೆ ದಾಟಬೇಕೆಂದು ವೇಗ ವಾಗಿ ಹೋಗುತ್ತಿದ್ದರು. ಶಾರದಾ ದೇವಿಯವರಿಗೆ ಇವರೊಂದಿಗೆ ಹೋಗಲು ಸಾಧ್ಯವಾಗಲಿಲ್ಲ. ತನಗೆ, ಒಬ್ಬಳಿಗಾಗಿ, ಎಲ್ಲರೂ ಏತಕ್ಕೆ ಕಷ್ಟದಲ್ಲಿ ಬೀಳಬೇಕು ಎಂದು ಯೋಚಿಸಿ ಅವರಿಗೆ, ನೀವು ಮುಂದೆ ಮುಂದೆ ಹೋಗಿ, ನಾನು, ನಿಧಾನವಾಗಿ ಬಂದು ಸೇರುತ್ತೇನೆ ಎಂದು ಹೇಳಿದರು. ಅವರೆಲ್ಲರೂ ಮುಂದೆ ಹೊರಟರು. ಕೊನೆಗೆ ಶಾರದಾ ದೇವಿಯವರೊಬ್ಬರೇ ಆದರು. ಸಂಜೆಯಾಯಿತು. ಹಿಂದಿನಿಂದ ಭೀಮಾ ಕಾರದ ಕರಾಳ ಮನುಷ್ಯನು ದೊಡ್ಡ ದೊಣ್ಣೆಯನ್ನು ಹಿಡಿದುಕೊಂಡು ಬರುತ್ತಿದ್ದನು. ಈ ಮನುಷ್ಯನನ್ನು ನೋಡಿ ಇವರಿಗೆ ಅಂಜಿಕೆಯಾಯಿತು. ಆದರೆ ಸುಮ್ಮನೆ ಕಿರಚಿದರೆ ಪ್ರಯೋಜನವಿಲ್ಲವೆಂದು ಮನಸ್ಸಿಗೆ ಧೈರ್ಯ ತಂದುಕೊಂಡರು. ಆ ಮನುಷ್ಯನು, ಯಾರು ಹೋಗುವರು? ಎಂದು ಘರ್ಜಿಸಿದನು. ಆಗ ಶಾರದಾ ದೇವಿಯವರು ನಿಂತುಕೊಂಡು "ಅಪ್ಪ ನನ್ನ ಜೊತೆಯವರು ಬಿಟ್ಟು ಹೋದರು. ನನಗೆ ದಾರಿ ತಪ್ಪಿದಂತೆ ಕಾಣು ವುದು. ನಿನ್ನ ಅಳಿಯ ದಕ್ಷಿಣೇಶ್ವರದಲ್ಲಿ ಇರುವರು. ನೀನು ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಬಿಟ್ಟರೆ ಅವರು ತುಂಬಾ ಸಂತೋಷ

ಪಡುವರು" ಎಂದರು. ಅಷ್ಟು ಹೊತ್ತಿಗೆ ಒಬ್ಬ ಸ್ತ್ರೀ ಅವನ ಹಿಂದೆ ಬಂದಳು. ಆಗ ಶಾರದಾ ದೇವಿಯುವರಿಗೆ ಸ್ವಲ್ಪ ಧೈರ್ಯ ಬಂದಿತು. ಅವಳ ಹತ್ತಿರಹೋಗಿ "ನಾನು ನಿನ್ನ ಮಗಳು ಶಾರದೆ. ಜೊತೆಯವರು ಹೊರಟು ಹೋದರು. ಕಷ್ಟದಲ್ಲಿ ಸಿಕ್ಕಿ ಬಿದ್ದಿರುವೆನು. ದೇವರೆ ನನ್ನನ್ನು ಪಾರುಮಾಡಲು ತಂದೆಯನ್ನು ಮತ್ತು ನಿನ್ನನ್ನು ಕಳುಹಿಸಿದನು" ಎಂದು ಹೇಳಿದರು.

ಶಾರದಾ ದೇವಿಯುವರು ನಿಸ್ಸಂಕೋಚವಾಗಿ ಅವರನ್ನು, ತಂದೆ ತಾಯಿ ಎಂದು ಕರೆದಾಗ ಅವರ ಎದೆಗೆ ಮುಟ್ಟಿತು. ಅವರ ಹೃದಯ ದಿಂದಲೂ ತಾಯಿ ತಂದೆಗೆ, ಮಗಳ ಮೇಲೆ ಇರುವ ಪ್ರೇಮವನ್ನು ತಂದಿತು. ಕರಾಳ ದಂಪತಿಗಳು ಶಾರದ ದೇವಿಯುವರನ್ನು ಹತ್ತಿರದಲ್ಲೆ ಇದ್ದ ಒಂದು ಹಳ್ಳಿಗೆ ಕರೆದುಕೊಂಡು ಹೋದರು. ಒಂದು ಮನೆಯಲ್ಲಿ ಅಂದಿನ ರಾತ್ರಿ ತಂಗಿದ್ದರು. ಸ್ತ್ರೀ ಇವರಿಗೆ ಒಂದು ಹಾಸಿಗೆ ಮಾಡಿ ಕೊಟ್ಟಳು. ಬೆಳಗ್ಗೆ ಬೇಗ ಎದ್ದು ದೇವರ ಪೂಜೆಮಾಡಿ ಶಾರದಾ ದೇವಿಯುವರಿಗೆ ಔತಣಮಾಡಿ ಕೊಟ್ಟಳು. ಶಾರದಾ ದೇವಿಯುವರೊಂದಿಗೆ ಸ್ವಲ್ಪದೂರ ನಡೆದುಕೊಂಡು ಹೋಗಿ ಬೀಳ್ಕೊಟ್ಟರು. ಆಗ ಇಬ್ಬರ ಕಣ್ಣಿನಲ್ಲಿಯೂ ಕಂಬನಿದುಂಬಿತ್ತು. ಒಂದು ದಿನದ ಪರಿಚಯ ಅಷ್ಟು ನಿಕಟವಾಗಿತ್ತು.

ಈ ಕರಾಳ ದಂಪತಿಗಳಿಬ್ಬರೂ ಶಾರದಾ ದೇವಿಯುವರನ್ನು ನೋಡು ವುದಕ್ಕೆ ದಕ್ಷಿಣೇಶ್ವರಕ್ಕೆ ಹಲವು ವೇಳೆ ಬರುತ್ತಿದ್ದರಂತೆ. ಬರುವಾಗ ಶಾರದಾದೇವಿಗೆಂದು ತಿನ್ನಲು ಏನಾದರೂ ತರುತ್ತಿದ್ದರು. ಶಾರದಾ ದೇವಿಯುವರಿಂದ ಈ ಸಂಗತಿಯನ್ನು ತಿಳಿದ ಪರಮಹಂಸರು ಅವರನ್ನು ತಮ್ಮ ಮಾವ ಅತ್ತೆ ಎಂದು ನೋಡುತ್ತಿದ್ದರು. ಇವರ ವಿಚಾರವಾಗಿ ಮಾತನಾಡುತ್ತಿದ್ದಾಗ ಒಂದು ಸಲ ಶಾರದಾ ದೇವಿಯುವರು "ಅವನು ಈಗ ಸಾಧುವಂತೆ ಕಂಡರೂ ಹಿಂದೆ ಹಲವು ದರೋಡೆ ಮತ್ತು ಕೊಲೆ ಯನ್ನು ಮಾಡಿರಬಹುದು" ಎಂದರು.

ಪರಮಹಂಸರ ನೇತೃತ್ವದಲ್ಲಿ ಶಾರದಾ ದೇವಿಯುವರ ಸಾಧನೆ ಮುಂದುವರಿಯಿತು. ಪರಮಹಂಸರಿಗೆ, ಬಂದ ಭಕ್ತರೊಂದಿಗೆ ಮಾತ

ನಾಡಿ ಗಂಟಲ ರೋಗ ಪ್ರಾಪ್ತವಾಯಿತು. ಕಲ್ಕತ್ತೆಯ ವೈದ್ಯಪ್ರವೀಣರೆಲ್ಲ ತಮ್ಮ ಕುಶಲತೆಯನ್ನು ತೋರಿ ಚಿಕಿತ್ಸೆ ಮಾಡಿದರು. ಏನೂ ಪ್ರಯೋಜನವಾಗಲಿಲ್ಲ. ಶಾರದಾದೇವಿಯವರು ಹತ್ತಿರ ಇದ್ದ ತಾರಕೇಶ್ವರ ದೇವಸ್ಥಾನಕ್ಕೆ ಹೋಗಿ ಅನ್ನ ಆಹಾರವಿಲ್ಲದೆ ಎರಡು ದಿನ ಪ್ರಾರ್ಥನೆ ಮಾಡಿದರು. ಪತಿಗೆ ಆರೋಗ್ಯವನ್ನು ದಯಪಾಲಿಸು ಎಂಬುದೆ ಪ್ರಾರ್ಥನೆಯ ಗುರಿ. ಪರಮಹಂಸರಿಗೆ ಇದು ತಿಳಿಯಿತು. ಶಾರದಾದೇವಿಯ ಮೇಲೆ ವೈರಾಗ್ಯವನ್ನು ಬೀರು ಎಂದು ಪರಮಹಂಸರು ಜಗನ್ಮಾಯಿಯನ್ನು ಪ್ರಾರ್ಥಿಸಿದರು. ಒಂದು ದಿನ ರಾತ್ರಿ ಶಾರದಾದೇವಿಯವರು ಪ್ರಾರ್ಥನೆಯಲ್ಲಿ ಇದ್ದಾಗ, ಯಾವನೋ ಒಬ್ಬನು ಮಡಿಕೆಯ ರಾಶಿಯನ್ನು ದೊಣ್ಣೆಯಿಂದ ಹೊಡದಂತೆ ಆಯಿತು. ಈ ಶಬ್ದ ಕೇಳಿದೊಡನೆಯೆ "ದೇಹವೆಂಬುದು ಒಂದು ಮಡಿಕೆಯಂತೆ. ಅದನ್ನು ಕಾಲನು ಕೋಲಿನಿಂದ ಹೊಡೆದು ಒಡೆಯುವನು. ಗಂಡನಾರು ಹೆಂಡತಿಯಾರು? ಎಲ್ಲರೂ ಒಂದಲ್ಲ ಒಂದು ದಿನ ನಾಶವಾಗಬೇಕು" ಎಂದು ಮನೆಗೆ ಹಿಂತಿರುಗಿದರು.

ಶಾರದಾದೇವಿಯವರನ್ನು ಕಂಡೊಡನೆಯೆ ಪರಮಹಂಸರು "ಏನು ನೀನು ಹೋದ ಕೆಲಸ ಆಯಿತೆ. ಎಲ್ಲ ಮಾಯೆ? ಅಲ್ಲವೇ" ಎಂದರು. ಪರಮಹಂಸರಿಗೆ ಒಂದು ಆನೆ ಔಷಧಿ ತರುವುದಕ್ಕೆ ನೆಲವನ್ನು ತನ್ನ ಸೊಂಡಲಿನಿಂದ ಅಗೆಯುತ್ತಿದಂತೆ ಇವರಿಗೆ ಕನಸಾಯಿತಂತೆ.

ಪರಮಹಂಸರು ೧೮೮೬ ನೆ ಇಸವಿಯಲ್ಲಿ ಸಮಾಧಿಸ್ಥರಾದರು. ಶ್ರೀ ಶಾರದಾದೇವಿಯವರಿಗೆ ತಾತ್ಕಾಲಿಕವಾಗಿ ಅಷ್ಟು ವ್ಯಥೆಯಾಗಲಿಲ್ಲ. ಪರಮಹಂಸರು ಬೀರಿದ ವೈರಾಗ್ಯ ಪ್ರಭಾವ ಇನ್ನೂ ಅವರ ಮೇಲೆ ಇತ್ತು. ಆದರೆ ದಿನ ಕಳೆದಂತೆಲ್ಲ ಶಾರದಾದೇವಿಯವರಿಗೆ ದುಃಖ ದಾರುಣವಾಗುತ್ತ ಬಂದಿತು. ಅವರಿಗೆ ಪರಮಹಂಸರು ವಿನಃ ಮತ್ತೆ ಯಾರೂ ದಿಕ್ಕಿರಲಿಲ್ಲ. ಅವರು ಇವರ ಸರ್ವಸ್ವ. ತಮ್ಮ ಕೈ ಬಳೆಯನ್ನು ವಿಧವೆಯಂತೆ ಒಡೆಯಲು ಹೋದಾಗ ಇವರಿಗೆ ಪರಮಹಂಸರು ಕಾಣಿಸಿಕೊಂಡಂತೆ ತೋರಿತು. "ನಾನು ಕಾಲವಾದನೆಂದು ತಿಳಿಯಬೇಡ. ಒಂದು ಕೋಣೆಯಿಂದ

ಮತ್ತೊಂದು ಕೋಣೆಗೆ ಹೋಗಿರುವೆನು" ಎಂದರು. ಶಾರದಾದೇವಿ ಯವರ ದುಃಖ ಜೀವನದಲ್ಲಿ, ಈ ದೃಶ್ಯ, ಒಂದು ಊರುಗೋಲು ಆಯಿತು. ಪರಮಹಂಸರು ತಮ್ಮ ಪಾಲಿಗೆ ಒದುಕಿರುವರು, ಚಿನ್ಮಯ ರೂಪಿನಲ್ಲಿ ಇರುವರು, ತಮ್ಮನ್ನು ನೋಡಿಕೊಳ್ಳುತ್ತ ಇರುವರು, ಎಂದು ತಿಳಿದು ಕೊಂಡರು.

ಪರಮಹಂಸರ ಕಾಲಾನಂತರ ಅವರ ಭಕ್ತರು ಶಾರದಾದೇವಿ ಯವರ ದುಃಖವನ್ನು ಮರೆಸುವುದಕ್ಕಾಗಿ ಬೃಂದಾವನಕ್ಕೆ ಅವರನ್ನು ಕರೆದುಕೊಂಡು ಹೋದರು. ಬಾಲ್ಯದಿಂದಲೂ ಶ್ರೀ ಕೃಷ್ಣನ ಜೀವನ ಚರಿತ್ರೆಯನ್ನು ಮನೆಯಲ್ಲಿ ಕೇಳಿದ್ದರು. ಈಗ ಭಗವಂತನ ಬಾಲ ಲೀಲೆಯು ನ್ನೆಲ್ಲ ನೋಡಿದ ಬೃಂದಾವನಕ್ಕೆ ಬಂದರು. ಇಲ್ಲಿ ಒಂದು ವರುಷ ಧ್ಯಾನದಲ್ಲಿ ಕಳೆದರು. ಹಲವು ಆಧ್ಯಾತ್ಮಿಕ ಅನುಭವಗಳಾಗಿ ಜೀವನಕ್ಕೆ ಶಾಂತಿ ಸಿಕ್ಕಿತು. ತೀರ್ಥಯಾತ್ರೆಗೆ ಹೋದವರು ತಮಗೆ ಯಾವು ದಾದರೂ ತುಂಬ ಪ್ರೀತಿಯ ವಸ್ತುವೊಂದನ್ನು ಬಿಡುವ ರೂಢಿ. ಹಲವರು ತಮಗೆ ಸುಲಭವಾಗಿ ಸಿಕ್ಕದ ಹಣ್ಣನ್ನೊ ಅಥವಾ ಕೆಲಸಕ್ಕೆ ಬಾರದ ತರಕಾರಿಯನ್ನೊ, ಬಿಟ್ಟು ತಾವು ಪುಣ್ಯಕಟ್ಟಿಕೊಂಡೆವು ಎಂದು ತಿಳಿದು ಕೊಳ್ಳುವರು. ಆದರೆ ಶಾರದಾದೇವಿಯವರು ಇಂತಹ ಉಪಾಯವಂತರ ಗುಂಪಿಗೆ ಸೇರಿದವರಲ್ಲ. ಬೃಂದಾವನವನ್ನು ಬಿಡುವುದಕ್ಕೆ ಮುಂಚೆ ಶ್ರೀ ಕೃಷ್ಣ ದೇವಾಲಯಕ್ಕೆ ಹೋಗಿ ಮತ್ತೊಬ್ಬರಲ್ಲಿ ತಪ್ಪು ಕಂಡುಹಿಡಿಯುವ ಸ್ವಭಾವ ತಮ್ಮಲ್ಲಿ ಇಲ್ಲದೆ ಇರಲಿ ಎಂದು ಬೇಡಿ ಹಿಂತಿರುಗಿದರು. ಅಂದಿ ನಿಂದ ಅವರು ಯಾರು ಎಷ್ಟು ಪಟಿಂಗರಾಗಲೀ, ಪಾಪಿಗಳಾಗಿರಲೀ, ಮಾಡಬಾರದ ಕೆಲಸವನ್ನೂ ಮಾಡಿರಲೀ, ಅವರಲ್ಲಿ ತಪ್ಪು ಕಂಡು ಹಿಡಿಯುತ್ತಿರಲಿಲ್ಲ.

ಬೃಂದಾವನದಲ್ಲಿ ಒಂದು ವರುಷವಿದ್ದು ಕಲ್ಕತ್ತೆಗೆ ಬಂದರು. ಪರಮಹಂಸರು ಕಾಲವಾಗುವುದಕ್ಕೆ ಮುಂಚೆ ಶಾರದಾದೇವಿಯವರಿಗೆ "ನಾನು ಹೋದ ಮೇಲೆ ನೀನು ಕಮಾರಪುಕುರಕ್ಕೆ ಹೋಗಿ ಅಲ್ಲಿ ನಮ್ಮ ಮನೆಯಲ್ಲಿರು. ಏನಾದರೂ ಸಿಕ್ಕಲಿ, ಅನ್ನವಾಗಲೀ, ಸೊಪ್ಪಾಗಲೀ,

ಅದನ್ನೇ ಬೇಯಿಸಿ ತಿಂದು ಹರಿಯ ಹೆಸರನ್ನು ಹೇಳುತ್ತ ಕಾಲವನ್ನು ಕಳೆ" ಎಂದಿದ್ದರು. ಅದರಂತೆಯೇ ಶಾರದಾದೇವಿಯವರು ಕಮಾರಪುಕುರಕ್ಕೆ ಬಂದರು. ಪರಮಹಂಸರಿಗೆ ಸೇರಿದ ಹಳೆಯ ಮನೆಯಲ್ಲಿ ಇಳಿದುಕೊಂಡರು. ಅಲ್ಲಿ ಪರಮಹಂಸರ ನೆಂಟರು ಯಾರೂ ಇರಲಿಲ್ಲ. ಜೀವನೋಪಾಯಕ್ಕೆ ಹಲವು ಊರುಗಳಿಗೆ ಹೋಗಿದ್ದರು. ಕಣಜದಲ್ಲಿ ಸ್ವಲ್ಪ ಬತ್ತವಿತ್ತು. ಅದನ್ನು ಕುಟ್ಟಿ ಅನ್ನಮಾಡಿ ತಿನ್ನುತ್ತಿದ್ದರು. ಜೊತೆಗೆ ಉಪ್ಪು ಬೆರಸಿ ತಿನ್ನುವುದಕ್ಕೆ ಕೂಡ ದುಡ್ಡು ಇರಲಿಲ್ಲ. ಅಂಗಳದಲ್ಲಿ ನೆಲ ಅಗೆದು ಸ್ವಲ್ಪ ಸೊಪ್ಪನ್ನು ಬೆಳೆಸಿದರು. ರಾತ್ರಿ, ಹೊತ್ತಿಗೆ ಮುಂಚೆ ತಮ್ಮ ಕೆಲಸವನ್ನು ತೀರಿಸಿ, ಹರಿಯ ಹೆಸರನ್ನು ಹೇಳುತ್ತ ತಮ್ಮ ಕಾಲವನ್ನು ಕಳೆಯುತ್ತಿದ್ದರು.

ಕಮಾರಪುಕುರದ ಜನರು ಪೂರ್ವಾಚಾರ ಪರಾಯಣರು. ಶಾರದಾದೇವಿಯವರು ಉಳಿದ ವಿಧವೆಯರಂತೆ ಇರಲಿಲ್ಲ. ಅಂಚಿನ ಸೀರೆಯನ್ನು ಉಡುತ್ತಿದ್ದರು. ಇದನ್ನು ನೋಡಿ ಊರಿನ ಜನರೆಲ್ಲ ಆಡಿಕೊಳ್ಳುವುದಕ್ಕೆ ಮೊದಲು ಮಾಡಿದರು. ನರೇಂದ್ರನಾಥನು ಪರಮಹಂಸರಿಗೆ ದೇವಸ್ಥಾನದವರು ಕೊಡುತ್ತಿದ್ದ ಏಳು ರೂಪಾಯನ್ನು ಶಾರದಾದೇವಿಯವರಿಗೆ ಕೊಡಿಸಿಕೊಡಬೇಕೆಂದು ಪ್ರಯತ್ನಿಸಿದನು. ಆದರೆ ಪರಮಹಂಸರ ಕೆಲವು ನೆಂಟರೇ ಸೇರಿಕೊಂಡು ಇವರಿಗೆ ಆ ದುಡ್ಡು ಬಾರದಂತೆ ಮಾಡಿದರು. ಮೂರು ಮೈಲಿ ದೂರದಲ್ಲಿ ಶಾರದಾದೇವಿಯವರ ತಾಯಿ ಜಯರಾಮವಟಿಯಲ್ಲಿ ಇದ್ದರು. ಶಾರದಾದೇವಿಯವರನ್ನು, ಬಂದು ತಮ್ಮೊಂದಿಗೆ ಇರುವಂತೆ ಕೇಳಿಕೊಂಡರು. ಆದರೂ ಅವರು ಒಪ್ಪಿಕೊಳ್ಳಲಿಲ್ಲ. ಈ ಸಮಯದಲ್ಲಿ ಒಂದುದಿನ ಹುಚ್ಚನೊಬ್ಬನು ಒಂಟಿಯಾಗಿದ್ದಾಗ ಅಟ್ಟಿಸಿಕೊಂಡುಬಂದನು. ಆದರೆ ಅಂದು ರುದ್ರಕಾಳಿಯಂತೆ ಅವನನ್ನು ನೆಲದ ಮೇಲೆ ಕೆಡವಿ ಚೆನ್ನಾಗಿ ಬುದ್ಧಿ ಕಲಿಸಿಬಿಟ್ಟರು. ಮಾರನೆ ದಿನದಿಂದ ಪಶ್ಚಾತ್ತಾಪಪಟ್ಟು ಅವನ ಜೀವನವೆ ಬದಲಾಯಿಸಿತು. ಅಂದಿನಿಂದ ಒಬ್ಬ ಮುದುಕಿ ರಾತ್ರಿಯ ಹೊತ್ತು, ಬಂದು ಇವರೊಂದಿಗೆ ಮಲಗುತ್ತಿದ್ದಳು. ಅವಳ ಮೂಲಕ ಶಾರದಾದೇವಿಯವರ ಬಡತನ ಕಲ್ಕತ್ತೆಯಲ್ಲಿದ್ದ ಪರಮಹಂಸರ ಭಕ್ತರಿಗೆ ತಿಳಿಯಿತು. ಭಕ್ತರು ಶಾರದಾ

ದೇವಿಯವರನ್ನು ಕಲ್ಕತ್ತೆಗೆ ಬಂದು ಇರುವಂತೆ ಕೇಳಿಕೊಂಡರು. ಅನಂತರ ಶಾರದಾದೇವಿಯವರು ಕಲ್ಕತ್ತೆಯಲ್ಲಿ ವಾಸಿಸತೊಡಗಿದರು. ಅವರ ಬಡತನ ಅಂದಿನಿಂದ ಕೊನೆಗೊಂಡಿತು. ತಾವು ಬದುಕಿರುವ ಪರಿಯಂತರವೂ ಭಕ್ತರ ಆಧ್ಯಾತ್ಮಿಕ ಆರೈಕೆಯನ್ನು ಮಾಡುತ್ತಿದ್ದರು.

ಶಾರದಾದೇವಿಯವರ ತಪೋಪ್ರಭಾವ ಕ್ರಮೇಣ ಹೆಚ್ಚತೊಡಗಿತು. ಜಗದ ನಾನಾ ಕಡೆಯಿಂದ ಭಕ್ತಾದಿಗಳು ಒಂದು ಉಪದೇಶವನ್ನು ಸ್ವೀಕರಿಸಿ ಧನ್ಯರಾಗಿ ಹೋಗುತ್ತಿದ್ದರು. ಇದೇ ಸಮಯದಲ್ಲಿ ಇವರ ನಾಲ್ಕು ಜನ ತಮ್ಮಂದಿರು ಮತ್ತು ಇವರಿಗೆ ಸೇರಿದ ಪರಿವಾರ ಶಾರದಾದೇವಿಯವರ ಸುತ್ತಲೂ ಮುತ್ತಿಕೊಂಡಿತು. ಆದರೆ ಇವರು ಶಾರದಾ ದೇವಿಯಿಂದ ಇಚ್ಛಿಸುತ್ತಿದ್ದುದು ಭಕ್ತಿ, ಅಥವಾ ಜ್ಞಾನವಲ್ಲ. ಅವರಿಗೆ ಬೇಕಾಗಿದ್ದುದು ದುಡ್ಡು ಮಾತ್ರ. ಅವರ ಪಾಲಿಗೆ ಶಾರದಾ ದೇವಿಯವರು ಒಂದು ದುಡ್ಡಿನ ಮರವಾಗಿದ್ದರು. ಅವಶ್ಯಕವಿದ್ದಾಗ ಬಂದು ಅದನ್ನು ಅಲ್ಲಾಡಿಸಿ ಬಿದ್ದ ದುಡ್ಡನ್ನು ತೆಗೆದುಕೊಂಡು ಹೋಗುತ್ತಿದ್ದರು. ನಾಲ್ಕು ಜನ ಅಣ್ಣ ತಮ್ಮಂದಿರು ತಮ್ಮತಮ್ಮೊಳಗೆ ಕಾದಾಡುತ್ತಿದ್ದರು. ಮತ್ತೊಬ್ಬನು ತಾನು ಇಲ್ಲದಾಗ ಶಾರದಾ ದೇವಿಯವರಿಂದ ಏನನ್ನು ತೆಗೆದುಕೊಂಡು ಹೋದನೊ ಎಂಬುದೆ ಇದಕ್ಕೆ ಕಾರಣ. ಇದನ್ನೆಲ್ಲಾ ನೋಡಿ ಶಾರದಾ ದೇವಿಯವರಿಗೆ ತುಂಬಾ ವ್ಯಥೆಯಾಗುತ್ತಿತ್ತು. "ಅಯ್ಯೋ! ಬಾಯಿ ತಪ್ಪಿಯಾದರೂ ಭಕ್ತಿ-ಜ್ಞಾನ ಕೊಡು ಎಂದು ಬೇಡುವುದಿಲ್ಲವಲ್ಲ" ಎಂದು ಕೊರಗುತ್ತಿದ್ದರು.

ಒಂದು ಸಲ ತಾವು ಕಲ್ಕತ್ತೆಯಿಂದ ಜಯರಾಮವಟಿಗೆ ಬರುತ್ತೇನೆಂದು ನಾಲ್ಕು ಜನ ತಮ್ಮಂದಿರಿಗೂ ತಿಳಿಸಿದ್ದರು. ಊರಿನ ಸಮೀಪಕ್ಕೆ ಬರುವಾಗ ಒಬ್ಬನೂ ಇವರನ್ನು ನೋಡಲು ಬರಲಿಲ್ಲ. ಕೊನೆಗೆ ಒಬ್ಬರಾದ ಮೇಲೆ ಒಬ್ಬರು ಬಂದರು. ಇವರನ್ನು ನೋಡಿ 'ಏನು ಒಬ್ಬರಾದರೂ ಬರಬೇಡವೆ ನನ್ನನ್ನು ಬರಮಾಡಿಕೊಳ್ಳುವುದಕ್ಕೆ' ಎಂದು ಕೇಳಿದರು. ಅದಕ್ಕೆ ಅವರಲ್ಲಿ ಒಬ್ಬನು "ಎಲ್ಲಿ ನಾನು ನಿಮ್ಮನ್ನು ನೋಡಲು ಬಂದರೆ ಮತ್ತೊಬ್ಬನು ನನ್ನ ಮೇಲೆ ಕೋಪಗೊಳ್ಳುತ್ತಾ

ನೆಯೊ ಎಂದು ಒರಲಿಲ್ಲ. ಆದರೆ ನಿಮ್ಮ ಮೇಲೆ ನನಗೆ ಪ್ರೀತಿ ಇಲ್ಲ ಎಂದು ತಿಳಿದುಕೊಳ್ಳಬೇಡಿ. ಪ್ರತಿ ಜನ್ಮದಲ್ಲಿಯೂ ನೀವೇ ನನ್ನ ಅಕ್ಕ ನಾಗುವಂತೆ ಹರಸಿ" ಎಂದನು. ಅದಕ್ಕೆ ಶಾರದಾದೇವಿಯವರು "ಏನು ಇನ್ನೊಂದು ಜನ್ಮದಲ್ಲಿಯೂ ನಿಮ್ಮಂತಹ ತಮ್ಮಂದಿರ ಮನೆಯಲ್ಲಿ ಹುಟ್ಟು ತ್ತೇನೆ ಎಂದು ತಿಳಿದಿರೇನು? ನನ್ನ ತಾಯಿ ತಂದೆಯರು ಭಕ್ತಿಪರಾಯಣ ರಾಗಿದ್ದರು. ಅದಕ್ಕೆ ನಾನು ಇಲ್ಲಿ ಹುಟ್ಟಿದೆ" ಎಂದರು.

ಇವರ ತಮ್ಮಂದಿರಲ್ಲಿ ಕೊನೆಯವನು ಮಾತ್ರ ಸ್ವಲ್ಪ ಬುದ್ಧಿವಂತ ನಾಗಿದ್ದನು. ಅವನು ಕಲ್ಕತ್ತೆಯ ಮೆಡಿಕಲ್ ಕಾಲೇಜಿನಲ್ಲಿ ಓದಿ ಕೆಲಸಕ್ಕೆ ಸೇರುವುದರಲ್ಲಿದ್ದ. ಆ ಸಮಯದಲ್ಲಿ ಅವನು ಕಾಲವಾದನು. ಸಾಯು ವುದಕ್ಕೆ ಮುಂಚೆ ಗರ್ಭಿಣಿಯಾಗಿದ್ದ ತನ್ನ ಹೆಂಡತಿ ಸೌರಬಾಲೆಯನ್ನು ನೋಡಿಕೊಳ್ಳಬೇಕೆಂದು ಶಾರದಾದೇವಿಯವರನ್ನು ಪ್ರಾರ್ಥಿಸಿಕೊಂಡನು. ಸೌರಬಾಲೆಯ ಬುದ್ಧಿ ಸ್ಥಿಮಿತವಾಗಿರಲಿಲ್ಲ. ಮಗುವನ್ನು ಹೆತ್ತ ಮೇಲೆಯೂ ಆ ಮಗುವಿಗೆ ಶಾರದಾ ದೇವಿಯರನ್ನು ಕಂಡರೆ ಪ್ರೀತಿ ಹೆಚ್ಚಾಗಿತ್ತು. ಇದನ್ನು ಆಕೆ ಸೈರಿಸಲಾಗಲಿಲ್ಲ. ಮಾತೆತ್ತಿದರೆ ಶಾರದಾದೇವಿಯವರೊಂ ದಿಗೆ ವ್ಯಾಜ್ಯವಾಡುತ್ತಿದ್ದರು. ಆಕೆಯ ಮಗುವಿನ ಹೆಸರು ರಾಧೆ ಎಂದು. ಅವಳು ಬೆಳೆದು ದೊಡ್ಡವಳಾದ ಮೇಲೆ ತನ್ನ ತಾಯಂತೆಯೆ ಆದಳು. ಯಾವಾಗಲೂ ಶಾರದಾದೇವಿಯವರೊಂದಿಗೆ ಜಗಳಕ್ಕೆ ಕಾಲು ಕೆರೆಯು ತ್ತಿದ್ದಳು. ಶಾರದಾದೇವಿಯವರಿಗೆ ಬೇಕಾದಷ್ಟು ಕಷ್ಟವನ್ನು ಕೊಟ್ಟರು. ಇದನ್ನೆಲ್ಲಾ ಸಹಿಸಿಕೊಂಡು "ದೇವರೇ ಅವರಿಗೆ ಒಳ್ಳೆಯ ಬುದ್ಧಿಯನ್ನು ಕೊಡು" ಎಂದು ಶಾರದಾದೇವಿಯವರು ಪ್ರಾರ್ಥಿಸುತ್ತಿದ್ದರು.

ಒಟ್ಟಿನಲ್ಲಿ ನೋಡಿದರೆ ಇವರ ನೆಂಟರು ಜಗಳಗಂಟರು. ಧನ ಪಿಶಾಚಿ ಹಿಡಿದವರು. ಸ್ವಲ್ಪವಾದರೂ ದೇವರ ಮೇಲೆ ಪ್ರೀತಿ ವಿಶ್ವಾಸ ವಿರಲಿಲ್ಲ. ಇಂತಹ ಕೆಸರಿನಲ್ಲಿ ಶಾರದಾದೇವಿಯವರ ಜೀವನ ಒಂದು ಕಮಲದಂತೆ ಅರಳಿತ್ತು. ಇವರ ಉಪದೇಶಾಮೃತವನ್ನು ಹೀರುವುದಕ್ಕೆ ದುಂಬಿಗಳು ಜಗದ ನಾನಾ ಕಡೆಗಳಿಂದ ಬಂದು ಹೋಗುತ್ತಿದ್ದವು ಆದರೆ ಇವರ ನೆಂಟರಾದರೋ ಕೆಸರಿನಲ್ಲಿ ಕ್ರಿಮಿಗಳಂತೆ ಹೊರಳಾಡು

ತ್ತಿದ್ದರು. ತಮ್ಮಲ್ಲಿಯೆ ಹುಟ್ಟಿ ಬೆಳೆದ ಮಹಾವ್ಯಕ್ತಿಯ ಪ್ರಭಾವ ಇವರಿಗೆಗೊತ್ತಾಗಲಿಲ್ಲ. ವಜ್ರ ಪರೀಕ್ಷಕನಿಗೆ ಮಾತ್ರ ವಜ್ರದ ಬೆಲೆ ಗೊತ್ತಾಗುವುದು. ಬದನೇಕಾಯಿ ಮಾರುವವನಿಗೆ ಗೊತ್ತಾಗು ವುದೆ ?

ಶ್ರೀ ಶಾರದಾದೇವಿಯವರಲ್ಲಿ ಕಾಣುತ್ತಿದ್ದ ಅತ್ಯಂತ ಹಿರಿಯ ಗುಣವೆ ಅವರ ತಾಯ್ತನವು. ಅವರು ಸಾಧಾರಣ ಹೆಂಗಸಿನಂತೆ ಒಂಬತ್ತು ತಿಂಗಳು ಹೊತ್ತು ಹೆತ್ತು ತಾಯಿಯ ಪ್ರೀತಿಯನ್ನು ಸಂಪಾ ದಿಸ ಬೇಕಾಗಿರಲಿಲ್ಲ. ತಮ್ಮ ಸಮೀಪಕ್ಕೆ ಯಾರು ದೇವರ ಹೆಸರಿನಲ್ಲಿ ಬಂದರೋ ಅವರೆಲ್ಲರೂ ತಮ್ಮ ಮಕ್ಕಳು ಎಂದು ತಿಳಿದುಕೊಂಡರು. ಪರಮಹಂಸರು ಬದುಕಿರುವ ಕಾಲದಲ್ಲಿ ಶಾರದಾದೇವಿಯವರ ತಾಯಿ ಒಂದು ಸಲ ಪರಮಹಂಸರಿಗೆ ಕೇಳುವಂತೆ ಶಾರದೆಯ ಜೀವನದಲ್ಲಿ ಮಕ್ಕ ಳಿಂದ ಅಮ್ಮ ಎನ್ನಿಸಿಕೊಳ್ಳುವ ಅದೃಷ್ಟ ಒದಗಲಿಲ್ಲ ಎಂದುಕೊಂಡರು. ಇದನ್ನು ಪರಮಹಂಸರು ಕೇಳಿ "ಇದಕ್ಕಾಗಿ ಏತಕ್ಕೆ ವ್ಯಥೆಪಡುತ್ತೀರಿ. ಜಗದ ನಾನಾ ಕಡೆಗಳಿಂದ ಅತ್ಯಂತ ಪವಿತ್ರಾತ್ಮರು ಬಂದು ಹಗಲು ರಾತ್ರಿ ತಾಯಿ, ತಾಯಿ ಎಂದು ಸೇವೆ ಮಾಡಲು ತವಕ ಪಡುವರು" ಎಂದರು. ಈ ಮಾತು ಶಾರದಾದೇವಿಯವರ ಜೀವನದಲ್ಲಿ ಅಕ್ಷರಶಃ ನಿಜವಾಯಿತು. ಇವರ ಭಕ್ತರ ತಂಡದಲ್ಲಿ ಕ್ರೈಸ್ತರಿದ್ದರು, ಪಾರ್ಸಿಯ ರಿದ್ದರು, ಮಹಮ್ಮದೀಯರಿದ್ದರು, ಹಿಂದೂ ಧರ್ಮದ ಹಲವು ಪಂಗಡಕ್ಕೆ ಸೇರಿದವರೆಲ್ಲರೂ ಇದ್ದರು.

ಇವರೆಡೆಗೆ ಬಂದವರು ಎಲ್ಲರೂ ಉತ್ತಮ ಚಾರಿತ್ರದವರಲ್ಲ. ಎಷ್ಟೋ ಜನ ಹೀನ ಜೀವನವನ್ನು ನಡೆಸಿದ್ದರು. ಆದರೆ ಅವರಲ್ಲಿರುವ ದೋಷ ವನ್ನು ನೋಡುತ್ತಿರಲಿಲ್ಲ. ಅವರ ಜೀವನದಲ್ಲಿ ಚುಕ್ಕಿಯಂತೆ ಮಿನುಗುವ ಹಲವು ಒಳ್ಳೆಯ ಗುಣಗಳನ್ನು ಮಾತ್ರ ನೋಡುತ್ತಿದ್ದರು. ಎಷ್ಟು ದುಷ್ಟ ಕೆಲಸವನ್ನು ಮಾಡುತ್ತಿದ್ದರೂ ಒಂದು ಸಲ "ಅಯ್ಯೋ" ಎಂದರೆ ಸಾಕು ಎಲ್ಲವನ್ನೂ ಮರೆಯುತ್ತಿದ್ದರು. ಶಂಕರಾಚಾರ್ಯರು ಪ್ರಪಂಚದಲ್ಲಿ ಕೆಟ್ಟ ಮಕ್ಕಳು ಹುಟ್ಟುವರು ಆದರೆ ಕೆಟ್ಟ ತಾಯಿ ಹುಟ್ಟುವುದಿಲ್ಲ ಎಂದು

ಭವಾನಿಯನ್ನು ಪ್ರಾರ್ಥಿಸುವಾಗ ಹೇಳಿರುವರು. ಶಾರದಾದೇವಿಯವರ ಜೀವನವು ಕೂಡ ಅದರಂತೆ.

ಒಬ್ಬ ಭಕ್ತನು ಏನೊ ತಪ್ಪು ಕೆಲಸವನ್ನು ಮಾಡಿದ್ದನು. ಅವನನ್ನು ಹತ್ತಿರ ಸೇರಿಸಬೇಡಿ ಎಂದು ಹಿರಿಯ ಸ್ವಾಮಿಗಳು ಹೇಳಿದ್ದರು. ಅದಕ್ಕೆ ಶಾರದಾದೇವಿಯವರು "ನನ್ನ ಮಗು ಕೆಸರಿನಲ್ಲಿ ಬಿದ್ದು ಕೊಳೆ ಮಾಡಿಕೊಂಡರೆ ಅದನ್ನು ಮೇಲೆತ್ತಿ ಮುತ್ತಿರುವ ಕೆಸರನ್ನು ತೊಳೆಯುವುದು ನನ್ನ ಕೆಲಸವಲ್ಲವೆ?" ಎಂದರು.

ಒಂದು ಸಲ ದಾರಿತಪ್ಪಿದ ಹೆಂಗಸೊಬ್ಬಳು ಶಾರದಾದೇವಿಯವರ ಕೋಣೆಯ ಹತ್ತಿರ ಅಳುತ್ತ ನಿಂತಿದ್ದಳು. ಇದು ಶಾರದಾದೇವಿಯವರಿಗೆ ಗೊತ್ತಾಯಿತು. ಆಕೆಯನ್ನು ಒಳಗೆ ಕರೆದು ಅವಳ ಜೀವನದ ಕಥೆಯನ್ನು ಸಾವಧಾನವಾಗಿ ಕೇಳಿದರು. ನಂತರ "ನೀನು ಅದಕ್ಕೆ ಪಶ್ಚಾತ್ತಾಪಪಟ್ಟಿರುವೆ ಅದು ಸಾಕು. ವ್ಯಥೆಪಡಬೇಡ. ಹೋಗಿ ಗುರುದೇವನಿಗೆ ನಮಸ್ಕರಿಸು, ಉಪದೇಶವನ್ನು ಕೊಡುವೆ ಎಂದು ಹೇಳಿದರು. ಹತ್ತಿರದ್ದ ಒಬ್ಬರು "ಇಂತಹ ಜನರಿಗೆ ನೀವು ಉಪದೇಶ ಕೊಡಲು ಮೊದಲು ಮಾಡಿದರೆ ಜನರು ಏನು ಎಂದಾರು?" ಎಂದರು. ಶಾರದಾದೇವಿಯವರು "ಪರಮಹಂಸರು ಬರಿಯ ರಸಗುಲ್ಲ ಮಾತ್ರ ತಿನ್ನುವುದಕ್ಕೆ ಬರಲಿಲ್ಲ" ಎಂದರು. ಅಂದರೆ ಕೇವಲ ಪುಣ್ಯವಂತರ ಉದ್ಧಾರಕ್ಕೆ ಮಾತ್ರವಲ್ಲ, ಪಾಪಿಗಳ ಉದ್ಧಾರಕ್ಕೂ ಅವರು ಜನ್ಮವೆತ್ತಿದರು. ಪುಣ್ಯವಂತರಿಗೆ ಅವರ ಸತ್ವದ ಬಲವೆ ಸಾಕು ದೇವರೆಡೆಗೆ ಹೋಗುವುದಕ್ಕೆ. ಆದರೆ ಪಾಪದ ಭಾರವನ್ನು ಹೊತ್ತವರಿಗೆ ಹೆಚ್ಚು ಬೇಕಾಗಿರುವುದು ಮಹಾತ್ಮರ ಆಶೀರ್ವಾದದ ಬಲ.

ಶಾರದಾ ದೇವಿಯವರು ಕಲ್ಕತ್ತೆಯಲ್ಲಿದ್ದಾಗ ಒಂದು ದಿನ ಅಡಿಗೆ ಮನೆಯಲ್ಲಿ ಪರಿಚಾರಕಳು ಏನನ್ನೊ ತಪ್ಪು ಮಾಡಿದಳು. ಅವಳನ್ನು ಅದಕ್ಕಾಗಿ ಒಬ್ಬ ಹಿರಿಯ ಹೆಂಗಸು ನಿಂದಿಸುತ್ತಿದ್ದಳು. "ಏನು ಇದು ಗದ್ದಲ" ಎಂದು ಶಾರದಾದೇವಿಯವರು ಕೇಳಿದರು, ಆಕೆ "ನಿಮಗೆ ಹೇಳಿ ಪ್ರಯೋಜನವೇನು." ಎಂದಳು. ಶಾರದಾ ದೇವಿಯವರು,

"ಪ್ರಪಂಚದಲ್ಲಿ ಸದಾ ಇನ್ನೊಬ್ಬರ ತಪ್ಪನ್ನು ನೋಡಲು ಕಾತುರರಾಗಿರುವವರಿಗೆ ಬರಗಾಲವಿಲ್ಲ. ನಾನು ಹಾಗೆ ನೋಡದೆ ಇದ್ದರೆ ಪ್ರಪಂಚವೇನು ನಿಂತು ಬಿಡುವುದಿಲ್ಲ" ಎಂದರು.

ಶ್ರೀ ರಾಮಕೃಷ್ಣ ಸಂಸ್ಥೆಯವರು ಬರಗಾಲ, ಪ್ರವಾಹ, ಬೆಂಕಿ, ಬಿರುಗಾಳಿಗೆ ತುತ್ತಾಗಿ ಕಷ್ಟಪಡುವ ಜನರಿಗೆ ಉಪಕಾರಕ್ಕೆಂದು ತೆರೆಯುವ ಸೇವಾಕೇಂದ್ರಗಳನ್ನು ತುಂಬಾ ಆಸಕ್ತಿಯಿಂದ ವಿಚಾರಿಸುತ್ತಿದ್ದರು. ಇವರ ಸಮೀಪಕ್ಕೆ ಬರುವ ಭಕ್ತರಿಗೆ ಇಂತಹ ಸಾರ್ವಜನಿಕ ಕೆಲಸಕ್ಕೆ ಸಹಾಯ ಮಾಡಬೇಕೆಂದು ಪ್ರೇರೇಪಿಸುತ್ತಿದ್ದರು. ಶ್ರೀ ರಾಮಕೃಷ್ಣ ಸಂಸ್ಥೆಯವರು ಅಂತಹ ಕೆಲಸವನ್ನು ಮಾಡಿ ಬಂದ ಮೇಲೆ ಅವರಿಂದ ಜನರ ಕಷ್ಟದ ಕಥೆಯನ್ನು ಕೇಳುತ್ತಿದ್ದರು. ಸ್ವಲ್ಪವಾದರೂ ನೀವು ಅವರ ಕಷ್ಟವನ್ನು ಕಡಿಮೆ ಮಾಡುವುದಕ್ಕೆ ಪ್ರಯತ್ನಿಸಿದಿರಲ್ಲ, ಎಂದು ಅವರನ್ನು ಹರಸಿ ಕಳುಹಿಸುತ್ತಿದ್ದರು.

ಎಂತಹ ಕೆಲಸವನ್ನಾದರೂ ಅವರು ಇನ್ನೊಬ್ಬರಿಗೆ ಮಾಡಲು ಹಿಂಜರಿಯುತ್ತಿರಲಿಲ್ಲ. ಸಾಧ್ಯವಾದ ಮಟ್ಟಿಗೆ ಒಬ್ಬರನ್ನು ಮತ್ತೊಬರ ನಿಂದೆಯಿಂದ ಕಾಪಾಡಲು ಯತ್ನಿಸುತ್ತಿದ್ದರು. ಒಂದು ದಿನ ಶಾರದಾ ದೇವಿಯವರು ಜಯರಾಮವಟಿಯಲ್ಲಿ ಇದ್ದಾಗ ಭಕ್ತನೊಬ್ಬನು ಅವರಿಗಾಗಿ ತರಕಾರಿಯನ್ನು ನೆರೆಯ ಹಳ್ಳಿಯಿಂದ ಒಬ್ಬ ಹೆಂಗಸಿನ ಕೈಯಲ್ಲಿ ಕಳುಹಿಸಿದನು. ಆಕೆ ಬಂದದ್ದು ಸಂಜೆ. ಪುನಃ ಕತ್ತಲಲ್ಲಿ ಊರಿಗೆ ಹೋಗಲು ಆಗಲಿಲ್ಲ. ರಾತ್ರಿ ಮಲಗಿಕೊಂಡಿದ್ದಾಗ ಜ್ವರ ಬಂದು ವಾಂತಿ ಮಾಡಿದಳು. ಶಾರದಾದೇವಿಯವರು ಎಂದಿನಂತೆ ಹೊತ್ತಿಗೆ ಮುಂಚೆ ಎದ್ದು ಈಕೆಯ ಸ್ಥಿತಿಯನ್ನು ನೋಡಿದರು. ವಾಂತಿಯನ್ನೆಲ್ಲ ಬಳಿದು ತೊಳೆದು ಈಕೆಯನ್ನು ಬೇರೆ ಕಡೆ ಹಾಸಿ ಮಲಗಿಸಿದರು. ಮನೆಯಲ್ಲಿ ಅನೇಕ ಜನರು ಇದ್ದರು. ಯಾರಾದರೂ ಅನಂತರ ಈ ಕೆಲಸವನ್ನು ಮಾಡುತ್ತಿದ್ದರು. ಆದರೆ ಅವರು ಮಾಡುವಾಗ ಅರಿಯದ ಹೆಂಗಸನ್ನು ದೂರಿಯಾರು ಎಂದು ಶಾರದಾದೇವಿಯವರೆ ಮಾಡಿದರು.

ಜಯರಾಮವಟಿಯಲ್ಲಿ ಒಂದು ಆಶ್ರಮವನ್ನು ಕಟ್ಟುತ್ತಿದ್ದರು. ಅಲ್ಲಿಗೆ ಕೆಲಸ ಮಾಡುವುದಕ್ಕೆ ಹಲವು ಮಹಮ್ಮದೀಯರು ಬರುತ್ತಿದ್ದರು. ಅವರಲ್ಲಿ ಅಮಜಾನ್ ಎಂಬ ಒಬ್ಬ ಮಹಮ್ಮದೀಯನನ್ನು ಒಂದು ದಿನ ಊಟಕ್ಕೆ ಕರೆದರು. ಆಗ ಇವರ ತಮ್ಮನ ಮಗಳನ್ನು ಅವನಿಗೆ ಬಡಿಸು ಎಂದರು. ಅವಳು ಬಡಿಸುವುದಕ್ಕೆ ಹತ್ತಿರ ಬಂದರೆ ಎಲ್ಲಿ ಬ್ರಾಹ್ಮಣ್ಯ ಹಾಳಾಗಿ ಹೋಗುವುದೋ ಎಂದು ದೂರದಿಂದಲೇ ಇವನ ಎಲೆಗೆ ಎಸೆಯುತ್ತಿದ್ದಳು. ಇದನ್ನು ನೋಡಿ ಹಾಗೆ ಬಡಿಸಿದರೆ ಅವನು ಹೇಗೆ ಊಟ ಮಾಡುವನು ಎಂದು ತಾವೆ ಅದನ್ನು ತೆಗೆದುಕೊಂಡು ಹತ್ತಿರ ಹೋಗಿ ಬಡಿಸಿದರು. ಇದನ್ನು ನೋಡಿ ಆಕೆ, "ನಿಮಗೆ ಜಾತಿ ಹೋಗುವುದಿಲ್ಲವೆ, ಅಷ್ಟು ಹತ್ತಿರ ಹೋದರೆ" ಎಂದಳು. ಅದಕ್ಕೆ ಶಾರದಾದೇವಿಯವರು, "ಸುಮ್ಮನೆ ಇರು, ಶಾರದಾನಂದ ಹೇಗೆ ನನಗೆ ಮಗನೊ ಇವನೂ ಹಾಗೆಯೆ ಮಗ" ಎಂದರು.

ಶ್ರೀ ಶಾರದಾದೇವಿಯವರು ಪ್ರತಿದಿನವೂ ಪೂಜೆಮಾಡುತ್ತಿದ್ದ ರೀತಿಯೆ ಬೇರೆ. ಆಗ ಒಂದು ಅಲೌಕಿಕ ತೇಜಸ್ಸು ಅವರ ಮುಖದಲ್ಲಿ ಹೊಳೆಯುತ್ತಿತ್ತು. ಅಲ್ಲಿ ಮಂತ್ರ ತಂತ್ರ ಜಾಗಟೆಯ ಆಡಂಬರ ಅಷ್ಟು ಇರಲಿಲ್ಲ. ಭಕ್ತಿಪೂರ್ವಕವಾಗಿ ತನ್ನ ಎದುರಿಗೆ ಭಗವಂತನು ಪೂಜೆಯನ್ನು ಸ್ವೀಕರಿಸುತ್ತಿರುವನು ಎಂದು ತಿಳಿದುಕೊಂಡು ಪೂಜಿಸುತ್ತಿದ್ದರು. ನೈವೇದ್ಯವನ್ನು ಕೊಡುವಾಗ "ಪ್ರಭು ಆಹಾರವನ್ನು ಸ್ವೀಕರಿಸು" ಎಂದು ತಿಳಿ ಬಂಗಾಳಿಯಲ್ಲಿ ಹೇಳುತ್ತಿದ್ದರು.

ಪ್ರಾಚೀನ ಸಂಪ್ರದಾಯದ ಬ್ರಾಹ್ಮಣಕುಲದಲ್ಲಿ ಇವರು ಹುಟ್ಟಿದರು. ಇಂದಿನಕಾಲದ ಹುಡುಗಿಯರಂತೆ ಶಾಲೆಗೆ ಹೋಗಿರಲಿಲ್ಲ. ಆದರೂ ಎಂತಹ ಸುಧಾರಕ ಚಿತ್ತವಿತ್ತು ಎನ್ನುವುದನ್ನು ಕೆಳಗಿನ ಪ್ರಸಂಗತೋರುವುದು.

ಭಕ್ತೆಯೊಬ್ಬರು ಬಂದು, "ನನಗೆ ಐದು ಮಂದಿ ಹೆಣ್ಣುಮಕ್ಕಳು. ಅವರಿಗೆ ಮದುವೆಮಾಡುವುದೆ ಒಂದು ದೊಡ್ಡ ಕಷ್ಟವಾಗಿದೆ" ಎಂದಳು.

ಶಾರದಾದೇವಿಯವರು "ಅದಕ್ಕೆ ಏತಕ್ಕೆ ಚಿಂತೆ, ನಿವೇದಿತಾ ಸ್ಕೂಲಿಗೆ ಕಳುಹಿಸು. ಓದುಬರಹ ಕಲಿಯಲಿ. ಆ ಮೇಲೆ ಸ್ತ್ರೀ ವಿದ್ಯಾ

ಪ್ರಚಾರಮಾಡಿ ದೇಶಸೇವೆ ಮಾಡುತ್ತಾಳೆ. ಅದರಿಂದ ಅವಳ ಆತ್ಮೋ ದ್ಧಾರವೂ ಆಗುವುದು" ಎಂದರು.

ಮತ್ತೊಬ್ಬರು—ಈಗ ಗಂಡು ಸಿಕ್ಕುವುದೇ ಕಷ್ಟವಾಗಿದೆ. ಅನೇಕ ಹುಡುಗರು ಮದುವೆಗೆ ಒಪ್ಪುವುದಿಲ್ಲ! ಎಂದಳು. ಶಾರದಾದೇವಿ "ಈಗ ಅವರಿಗೂ ಬುದ್ಧಿ ಬಂದಿದೆ. ಸಂಸಾರದ ಅನಿತ್ಯತೆ, ಅಸುಖ ಅವರಿಗೂ ತಿಳಿದಿದೆ. ಹೆಂಗಸರಿಂದ ಎಷ್ಟು ದೂರವಿದ್ದರೆ ಅಷ್ಟು ಒಳ್ಳೆಯದು. ಏಕಾಗ್ರತೆಯಿಂದ ದೇಶಸೇವೆ ಮಾಡಬಹುದು," ಎಂದರು.

ಒಂದು ದಿನ ನೆರೆದ ಹೆಂಗಸರಿಗೆ ಶಾರದಾದೇವಿಯವರು ಹೀಗೆ ಹೇಳಿದರು-ಮದುವೆಯಾದ ಗಂಡಹೆಂಡಿರು ಒಂದೆರಡು ಮಕ್ಕಳಾದ ಮೇಲೆ ಸಂಯಮಿಗಳು ಆಗಬೇಕು ಎಂದು ಪರಮಹಂಸರು ಹೇಳುತ್ತಿದ್ದರು. ನಮ್ಮಲ್ಲಿ ಹೊಟ್ಟೆಗೆ ಇರಲಿ ಇಲ್ಲದೆ ಇರಲಿ ಮಕ್ಕಳಾಗುವುದೇನೂ ತಪ್ಪು ವುದಿಲ್ಲ. ಆ ಮಕ್ಕಳು ಹುಟ್ಟುತ್ತಲೇ ದಾರಿದ್ರ್ಯದಿಂದ ಪೀಡಿತರಾಗಿ ನರಕಜೀವನವನ್ನು ಮಾಡುತ್ತಾರೆ. ಹುಡುಗಿ ನೋಡಿದರೆ ಚೋಟುದ್ದ ಆಗಲೆ ಅವಳ ಹಿಂದೆ ಮುಂದೆ ಸೊಂಟದಮೇಲೆ ಮಕ್ಕಳಾಗಿ ನಂತರ ಸಂಸಾರದಲ್ಲಿ ಆಸೆ ಕುಗ್ಗಿ ನಿರಾಶರಾಗಿ ಸಂಸಾರವನ್ನೇ ಹಳಿಯುತ್ತಾರೆ!

ಅಲ್ಲಿದ್ದ ಸ್ತ್ರೀಭಕ್ತೆಯೊಬ್ಬಳು "ಪತಿಯೆ ಪರದೈವ" ಎಂದು ನಮ್ಮ ಶಾಸ್ತ್ರಗಳು ಸಾರುತ್ತವೆ. ಹೀಗಿರವಾಗ ಅವರಿಗೆ ವಿರೋಧವಾಗಿ ಸಂಯಮಿಗಳಾದರೆ ಪಾಪವಲ್ಲವೆ?" ಎಂದಳು. ಶಾರದಾದೇವಿಯವರು "ದೇವರಿಗಾಗಿ ಹೀಗೆ ಮಾಡಿದರೆ ಪಾಪವೆಲ್ಲಿಂದ ಬರುವುದು. ಇಂದ್ರಿಯ ಸಂಯಮ ಆವಶ್ಯಕ. ಹಾಗೆ ಮಾಡಿದರೆ ಪತಿ ಉದ್ಧಾರವಾಗಿ ಪರದೈವ ವಾಗುತ್ತಾನೆ" ಎಂದರು.

ಶ್ರೀ ರಾಮಕೃಷ್ಣ ಸಂಘಕ್ಕೆ ಸೇರಿದ ಹಿರಿಯಸ್ವಾಮಿಗಳೆಲ್ಲ ಶ್ರೀ ಶಾರದಾದೇವಿಯವರನ್ನು ಅತಿಗೌರವದಿಂದ ಕಾಣುತ್ತಿದ್ದರು. ಸ್ವಾಮಿ ವಿವೇಕಾನಂದರಿಗೆ ಶಾರದಾದೇವಿಯವರ ಮಾತು ಒಂದು ಶಾಸನದಂತೆ ಇತ್ತು. ಇವರು ಅಮೇರಿಕಾ ದೇಶಕ್ಕೆ ಹೋಗುವುದಕ್ಕೆ ಮುಂಚೆ ಶಾರದಾದೇವಿಯವರ ಅಭಿಪ್ರಾಯವನ್ನು ಕೇಳಿ ಅವರ ಆಶೀರ್ವಾದವನ್ನು

ಪಡೆದು ಹೊರಟರು. ಅಲ್ಲಿ ವೇದಾಂತವನ್ನು ಬೋಧಿಸಿ ಕೀರ್ತಿಗಳಿಸಿ ಭರತಖಂಡಕ್ಕೆ ಬಂದಮೇಲೆ ಶ್ರೀ ರಾಮಕೃಷ್ಣ ಮಹಾಸಂಘದ ಕೇಂದ್ರಕ್ಕಾಗಿ ಬೇಲೂರು ಮಠವನ್ನು ಕಟ್ಟಿಸಿದರು. ಒಂದು ದಿನ ಶಾರದಾದೇವಿಯವರನ್ನು ಅಲ್ಲಿಗೆ ಬರಮಾಡಿಕೊಂಡರು. ಅದೇ ಸಮಯದಲ್ಲಿ ಸ್ವಾಮಿ ವಿವೇಕಾನಂದರ ತಾಯಿಯು ಕೂಡ ಬಂದಿದ್ದರು. ಅವರು ತಮ್ಮ ಮಗ ಕಟ್ಟಿಸಿದ ಮನೆಮಠಗಳನ್ನು ನೋಡುತ್ತ ಅತಿ ಸಹಜವಾದ ತಾಯಿಯ ಹೆಮ್ಮೆಯಿಂದ ಅಲ್ಲಿ ಬೆಳೆದ ಮೆಣಸಿನಕಾಯಿ ಮುಂತಾದುವನ್ನು ಬಿಡಿಸುತ್ತಿದ್ದರು. ಶಾರದಾದೇವಿಯವರು ಬರುತ್ತಿರುವುದನ್ನು ಅವರು ಗಮನಿಸಲೇ ಇಲ್ಲ. ಸ್ವಾಮಿ ವಿವೇಕಾನಂದರು ಇದನ್ನು ನೋಡಿ "ಅಮ್ಮ ಎಲ್ಲ ನನ್ನಿಂದ ಆಯಿತು ಎಂದು ತಿಳಿಯಬೇಡ. ನೋಡು ಅಲ್ಲಿ ಶಾರದಾದೇವಿಯವರು ಇರುವರು. ಎಲ್ಲಾ ಅವರ ಅನುಗ್ರಹದ ಬಲ. ಪೂರ್ವಜನ್ಮದ ಪುಣ್ಯದಿಂದ ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದೆ. ಮುಂದಿನ ಜನ್ಮದಲ್ಲಿಯೂ ನನ್ನಂತಹ ಮಕ್ಕಳೇ ಆಗಲಿ ಎಂದು ಇವರನ್ನು ಬೇಡು" ಎಂದರು.

ಕೀರ್ತಿಯನ್ನು ಗಳಿಸುವುದು ಸುಲಭ. ಆದರೆ ಅದನ್ನು ಅರಗಿಸಿಕೊಳ್ಳುವುದು ಕಷ್ಟ ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಿದ್ದರು. ಇದರಂತೆಯೇ ಜಗದ ನಾನಾ ಕಡೆಯಿಂದ ಬಂದ ಭಕ್ತರು ಶಾರದಾದೇವಿಯವರನ್ನು ಮಾತೃ ಪೀಠದಲ್ಲಿಟ್ಟು ಪೂಜಿಸುತ್ತಿದ್ದರು. ಭಕ್ತಿ ಗೌರವವೆಲ್ಲಾ ನನಗೆ ಸಲ್ಲುವುದು ಎಂದು ತಿಳಿಯದೆ, ಶ್ರೀಗುರುದೇವರ ಪರವಾಗಿ ಅದನ್ನು ಸ್ವೀಕರಿಸಿ ಪುನಃ ಅದನ್ನು ಗುರುದೇವರಿಗೆ ಕೊಟ್ಟು ಧನ್ಯರಾಗುತ್ತಿದ್ದರು. ಅವರ ಜೀವನದಲ್ಲಿ ನಾನು ಎಂಬ ಅಹಂಕಾರ ಸ್ವಲ್ಪವೂ ಇರಲಿಲ್ಲ. ಅಲ್ಲಿ ತಾಂಡವವಾಡುತ್ತಿದ್ದುದು ನೀನು ಎಂಬ ದೈನ್ಯತೆಯ ಮಧುರ ಭಾವವೊಂದೆ.

ಶಾರದಾದೇವಿಯವರು ಭರತ ಖಂಡದಲ್ಲೆಲ್ಲಾ ತೀರ್ಥಯಾತ್ರೆ ಮಾಡಿದರು. ದಕ್ಷಿಣ ದೇಶಕ್ಕೂ ಬಂದಿದ್ದರು. ರಾಮೇಶ್ವರಕ್ಕೆ ಹೋಗಿದ್ದರು. ೧೯೧೦ ರಲ್ಲಿ ಬೆಂಗಳೂರಿಗೆ ಬಂದಿದ್ದರು. ಹಲವಾರು ಭಕ್ತರು ಇವರನ್ನು ನೋಡಿ ಆಶೀರ್ವಾದ ಪಡೆದು ಕೃತಾರ್ಥರಾದರು.

ಶಾರದಾದೇವಿಯವರಿಗೆ ೬೭ ವರುಷ ವಯಸ್ಸಾಯಿತು. ಬರ ಬರುತ್ತ ದೇಹ ಕ್ಷೀಣಿಸಿತು. ಕಲ್ಕತ್ತೆಯ ನುರಿತ ವೈದ್ಯರೆಲ್ಲ ಚಿಕಿತ್ಸೆ ಮಾಡಿದರು. ಆದರೆ ಪ್ರಯೋಜನವಾಗಲಿಲ್ಲ. ಒಮ್ಮೆ ಅವರು ಹೀಗೆ ರೋಗಶಯ್ಯೆಯಲ್ಲಿ ನರಳುತ್ತಿದ್ದಾಗ ಭಕ್ತಳೊಬ್ಬಳು ಬಂದು ಇವರ ಹತ್ತಿರ ಅಳುತ್ತ ನಿಂತಳು. ಏತಕ್ಕೆ ಅಳುವೆ? ಎಂದು ಕೇಳಿದರು. ಆಕೆ "ನೀವು ನಮ್ಮನ್ನು ಬಿಟ್ಟು ಹೋದಮೇಲೆ ಯಾರು ನಮಗೆ ಸಹಾಯಕರು. ನಾವು ಅನಾಥರಾಗುವೆವು" ಎಂದಳು. ಶಾರದಾದೇವಿಯವರು "ಮಗು ನಾನು ಹೇಳುವುದನ್ನು ಕೇಳು. ಮನಶ್ಶಾಂತಿ ಬೇಕಾದರೆ ಇನ್ನೊಬ್ಬರಲ್ಲಿ ತಪ್ಪು ಕಂಡು ಹಿಡಿಯಬೇಡ. ಅದರ ಬದಲು ನಿನ್ನಲ್ಲಿ ತಪ್ಪು ಹುಡುಕು. ಪ್ರಪಂಚವನ್ನೆಲ್ಲ ನಿನ್ನದನ್ನಾಗಿ ಮಾಡಿಕೊ. ಯಾರೂ ಪರಕೀಯರಲ್ಲ" ಎಂದರು. ಈ ಸಂದೇಶ ಒಂದೆ ಆ ಭಕ್ತಳ ಮೂಲಕ ಜಗತ್ತಿಗೆ ದೊರೆತ ಕೊನೆ ಉಪದೇಶ.

೧೯೨೦ ನೇ ಜುಲೈ ೨೦ ನೇ ತಾರೀಖು ಪರಂಧಾಮವನ್ನು ಐದಿದರು. ಅವರ ಜ್ಞಾಪಕಾರ್ಥವಾಗಿ ಈಗಲೂ ಅವರು ಬಾಲ್ಯ ದಿಂದಲೂ ಪ್ರೀತಿಸುತ್ತಿದ್ದ ಗಂಗಾ ನದಿಯ ತೀರದಲ್ಲಿ, ಬೇಲೂರು ಮಠದ ಆವರಣದಲ್ಲಿ, ಅವರಿಗೊಂದು ಗುಡಿಯನ್ನು ಕಟ್ಟಿರುವರು. ಅದರೊಳಗೆ ಶಾರದಾದೇವಿಯವರ ಭಾವಚಿತ್ರವಿದೆ. ಮಾತೃಪ್ರೇಮ ಅಲ್ಲಿ ತಾಂಡವ ವಾಡುವಂತೆ ತೋರುವುದು.

ಹಲವಾರು ಗ್ರಂಥರಾಶಿಯನ್ನು ಓದಿ ಕಂಠಪಾಠ ಮಾಡಿಕೊಂಡ ಅರಗಿಳಿಯಂತಿರುವ ಒಣ ಪಂಡಿತರ ಗುಂಪಿಗೆ ಇವರು ಸೇರಿದವರಲ್ಲ. ಭಗವಂತನ ಸಾಕ್ಷಾತ್ಕಾರದ ತೀರ್ಥವನ್ನು ಕುಡಿದವರು ಇವರು. ಇವರು ಹೇಳುತ್ತಿದ್ದ ಸರಳ ಮಾತಿನಲ್ಲಿ ಹೃದಯಕ್ಕೆ ತೃಪ್ತಿ ಕೊಡುವ ಶಕ್ತಿ ಇತ್ತು; ಸಂದೇಹವನ್ನು ನಿವಾರಣೆ ಮಾಡುತ್ತಿತ್ತು. ಜೀವನದಲ್ಲಿ ನಡೆದು ನಡೆದು ಸಾಕಾಗಿ ನಿರಾಶನಾದವನಿಗೆ ಇವರ ಮಾತು ಸಂಜೀವಿನಿ ಯಂತೆ ಇತ್ತು. ಪುನಃ ಶಕ್ತಿ ಅಂಗೋಪಾಂಗದಲ್ಲಿ ಸಂಚರಿಸುವಂತೆ ಮಾಡುತ್ತಿತ್ತು. ಅವರ ಕೆಲವು ಸಂದೇಶಗಳಿವು:—

ಧ್ಯಾನವನ್ನು ಅಭ್ಯಾಸಮಾಡಿ. ಕ್ರಮೇಣ ನಿಮ್ಮ ಮನಸ್ಸು ಶಾಂತವಾಗಿ ಏಕಾಗ್ರವಾಗುವುದು. ಆಗ ಧ್ಯಾನ ಮಾಡದೆ ಇರುವುದಕ್ಕೇ ನಿಮಗೆ ಆಗುವುದಿಲ್ಲ.

ದೇವರಲ್ಲದೆ ಮತ್ತೆ ಯಾವ ವಸ್ತುವಿನ ಕಡೆ ಮನಸ್ಸು ಹೋದರೂ ಅದನ್ನು ಅನಿತ್ಯವೆಂದು ತಿಳಿಯಿರಿ. ಭಗವಂತನ ಪವಿತ್ರ ಪಾದಾರವಿಂದಗಳಲ್ಲಿ ಶರಣು ಹೊಂದಿ.

ಒಬ್ಬನು ಕರ್ಮ ಮಾಡಲೇ ಬೇಕು. ಕರ್ಮದ ಮೂಲಕ ಮಾತ್ರ ಒಬ್ಬನು ಕರ್ಮ ಒಂಧನದಿಂದ ಪಾರಾಗಬಲ್ಲ. ಕರ್ಮದಿಂದ ಅನಾಸಕ್ತಿಯನ್ನು ಪಡೆಯುವನು. ಒಂದು ಕ್ಷಣವಾದರೂ ಕೆಲಸವಿಲ್ಲದೆ ಸುಮ್ಮನೇ ಇರಬೇಡಿ.

ಪ್ರಪಂಚದಲ್ಲಿ ಬೇಕಾದಷ್ಟು ಅನುಭವಿಸಿ ಕೆಲವರು ದೇವರ ಕಡೆಗೆ ತಿರುಗುವರು. ಆದರೆ ಯಾರು ಬಾಲ್ಯದಿಂದಲೇ ತಮ್ಮ ಮನಸ್ಸನ್ನು ಭಗವಂತನಿಗೆ ಹೂವಿನಂತೆ ಅರ್ಪಿಸುವರೋ ಅವರೇ ಧನ್ಯರು.

ಮನಸ್ಸು ಕಾಡಾನೆಯಂತೆ ತನ್ನ ಇಚ್ಛೆಬಂದೆಡೆ ಹೋಗುವುದು. ಆದಕಾರಣ ಒಬ್ಬನು ಯಾವಾಗಲೂ ಒಳ್ಳೆಯದು ಮತ್ತು ಕೆಟ್ಟದನ್ನು ಕುರಿತು ವಿಮರ್ಶಿಸಬೇಕು. ಭಗವಂತನನ್ನು ಪಡೆಯುವುದಕ್ಕೆ ಪ್ರಯತ್ನ ಪಡಬೇಕು.

ಒಬ್ಬನು ತನ್ನ ಹಿಂದಿನ ಕರ್ಮಪರಿಣಾಮದಿಂದ ತಪ್ಪಿಸಿಕೊಳ್ಳಲಾರ. ಆದರೆ ಭಕ್ತಿಯಿಂದ ಬಾಳಿದರೆ, ಕಾಲೇ ಕತ್ತರಿಸಿ ಹೋಗುವಂತೆ ಇದ್ದರೆ ಒಂದು ಸಣ್ಣ ಮುಳ್ಳಿನ ನೋವಿನಿಂದ ಮಾತ್ರ ಪಾರಾಗುವನು.

ಸುಮ್ಮನೇ ಮನಸ್ಸಿನಲ್ಲಿ ಸಮಸ್ಯೆಗಳನ್ನು ತುಂಬಬೇಡ. ಒಂದನ್ನು ಅನುಷ್ಠಾನಕ್ಕೆ ತರುವುದೇ ಎಷ್ಟೋ ಕಷ್ಟ, ಆದರೂ ಬೇಕಾದಷ್ಟು ಸಮಸ್ಯೆಗಳಿಗೆ ನಿಮಂತ್ರಣವನ್ನು ಕೊಡುವನು.

ಆಸೆಯಿಂದ ಈ ದೇಹ ಹುಟ್ಟುವುದು. ಆಸೆ ಇಲ್ಲದೇ ಇದ್ದರೆ ದೇಹ ತಾನೇ ಬಿದ್ದು ಹೋಗುವುದು. ಆಸೆ ಸಂಪೂರ್ಣವಾಗಿ ಮಾಯವಾದಾಗ ಮುಕ್ತಿ ಲಭಿಸುವುದು.

ನೀನು ದೇವರನ್ನು ಪ್ರಾರ್ಥಿಸದೆ ಇದ್ದರೆ ಅವನಿಗೆ ಏನಂತೆ. ಅದು ನಿನ್ನ ದುರದೃಷ್ಟ.

ತಗ್ಗಿನ ಪ್ರದೇಶದ ಕಡೆ ಹರಿದುಕೊಂಡು ಹೋಗುವ ಸ್ವಭಾವವಿರುವ ನೀರು ಕೂಡ, ಸೂರ್ಯ ಕಿರಣ ಸಹಾಯದಿಂದ ಆಕಾಶಕ್ಕೆ ಏರುವುದು. ಇದರಂತೆಯೆ ವಿಷಯ ವಸ್ತುಗಳ ಕಡೆಗೆ ಹೋಗುವ ಸ್ವಭಾವವುಳ್ಳ ಮನಸ್ಸು ಕೂಡ ದೇವರ ದಯೆಯಿಂದ ಮೇಲೇರುವುದು.

ಯಾವುದಾದರೂ ಮಹಾ ಸಾಹಸ ಕಾರ್ಯಕ್ಕೆ ಉದ್ರೇಕಿತರಾಗಿ ಪ್ರೇರಿತರಾದಾಗ, ಹಲವರು ದೊಡ್ಡ ಕೆಲಸಗಳನ್ನು ಮಾಡುವರು. ಆದರೆ ಜನರು ಪ್ರತಿದಿನ ಮಾಡುವ ಸಣ್ಣ ಕೆಲಸದಲ್ಲಿ ಅವರ ನೈಜ ಸ್ವಭಾವ ತೋರುವುದು.

ನಿಸ್ಸಂದೇಹವಾಗಿಯೂ ನೀನು ಕರ್ಮದಲ್ಲಿ ನಿರತನಾಗಿರಬೇಕು. ಮನಸ್ಸಿನ ಚಂಚಲತೆಯನ್ನು ಕರ್ಮ ತಗ್ಗಿಸುವುದು. ಅದರ ಜತೆಗೆ ಪ್ರಾರ್ಥನೆ ಮತ್ತು ಧ್ಯಾನ ಆವಶ್ಯಕ. ಧ್ಯಾನಕ್ಕೆ ಬೆಳಗ್ಗೆ ಒಂದುಸಾರಿ ಸಾಯಂಕಾಲ ಒಂದು ಸಾರಿಯಾದರೂ ಕುಳಿತುಕೊಳ್ಳಬೇಕು. ಧ್ಯಾನ ದೋಣಿಗೆ ಇರುವ ಚುಕ್ಕಾಣಿಯಂತೆ. ಒಬ್ಬನು ಸಂಜೆ ಧ್ಯಾನಕ್ಕೆ ಕುಳಿತಾಗ ದಿನವೆಲ್ಲ ಮಾಡಿದ ಕೆಲಸವನ್ನು ಪರೀಕ್ಷಿಸುವನು.

ಗಾಳಿ ಹೇಗೆ ಮೋಡವನ್ನು ಚದುರಿಸುವುದೊ, ಹಾಗೆಯೇ ಭಗವಂತನ ನಾಮೋಚ್ಚಾರಣೆ, ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆಯನ್ನು ಓಡಿಸುವುದು.

ಚಂದ್ರ ಹೇಗೆ ಹೆಚ್ಚುಕಡಿಮೆಯಾಗುವನೋ ಹಾಗೆಯೇ ಮನಸ್ಸಿಗೂ ಕೂಡ ಹೆಚ್ಚುಕಡಿಮೆಯಾಗುವ ಸ್ವಭಾವವಿರುವುದು.

ನೀನು ಏನು ಆಹಾರವನ್ನು ತೆಗೆದುಕೊಂಡರೂ ಅದನ್ನು ಮೊದಲು ದೇವರಿಗೆ ಅರ್ಪಿಸು. ಅದರಿಂದ ನಿನ್ನ ದೇಹ ಮತ್ತು ಮನಸ್ಸು ಶುದ್ಧವಾಗುವುದು.

ಪ್ರಾಪಂಚಿಕ ಪ್ರೀತಿ ದುಃಖದಲ್ಲಿ ಪರ್ಯವಸಾನವಾಗುವುದು. ಭಗವಂತನ ಪ್ರೀತಿ ಚಿರಶಾಂತಿಯನ್ನು ಕೊಡುವುದು.

ಅಪಾಯ ಮತ್ತು ಕಷ್ಟ ಬರುವುದಿಲ್ಲವೆಂದು ತಿಳಿಯುವುದು ದಡ್ಡತನ. ಅವು ಬಂದೇ ಬರುವುವು. ಆದರೆ ಅವು ಭಕ್ತನ ಕಾಲ ಕೆಳಗೆ, ನೀರು ಹರಿದುಹೋಗುವಂತೆ ಹೋಗುವುವು.

ಭಗವಂತನಲ್ಲಿ ಶರಣಾಗತರಾಗಿ. ಆಗ ಅವನ ದಯೆ ನಿಮಗೆ ತೋರುವುದು.

ದೇವರಿಗಾಗಿ ಯಾರು ಸರ್ವವನ್ನೂ ತ್ಯಾಗಮಾಡಿರುವರೋ ಅವರೇ ನರರೂಪಿ ನಾರಾಯಣ.

ದೇವರಲ್ಲಿ ಶರಣಾಗತರಾದವರಿಗೆ ವಿಧಿ ತನ್ನ ಆಜ್ಞೆಯನ್ನು ಕೂಡ ರದ್ದುಮಾಡುವುದು. ಬ್ರಹ್ಮನೇ ತಾನು ಜೀವಿಯ ಹಣೆಯ ಮೇಲೆ ಬರೆದ ಬರಹವನ್ನು ಅಳಿಸುವನು.

ಆತ್ಮ ಸಾಕ್ಷಾತ್ಕಾರವನ್ನು ಪಡೆದವರಿಗೆ ಏನು ಲಭಿಸುವುದು? ಅವರಿಗೆ ಏನಾದರೂ ಒಂದು ಜತೆ ಕೊಂಬು ಬೆಳೆಯುವುದೆ? ಇಲ್ಲ. ಅವರ ದೃಷ್ಟಿ ಬದಲಾವಣೆ ಆಗುವುದು. ನಿತ್ಯ ಅನಿತ್ಯ ವಸ್ತುವಿವೇಕ ಬರುವುದು. ಆತ್ಮಜ್ಞಾನ ಲಭಿಸುವುದು. ಜನನ ಮರಣಗಳ ಕೋಟಲೆಯಿಂದ ತಪ್ಪಿಸಿಕೊಂಡು ಚಿರಸಾಯುಜ್ಯ ಪದವಿಯನ್ನು ಹೊಂದುವನು.

———

## ಮೈಸೂರು

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟನೆಗಳು

---

| | | | |
|---|---|---|---|
| ಸ್ವಾಮಿ ವಿವೇಕಾನಂದ (ಕುವೆಂಪು) ... ... | ೩ | ೮ | ೦ |
| ಶ್ರೀ ಶಾರದಾ ದೇವಿ ... ... ... | ೨ | ೦ | ೦ |
| ಶ್ರೀ ರಾಮಕೃಷ್ಣ (ಮಾಸ್ತಿ ವೆಂಕಟೇಶ ಐಯ್ಯಂಗಾರ್) ... | ೧ | ೮ | ೦ |
| ಕರ್ಮ ರಹಸ್ಯ ... ... ... | ೦ | ೪ | ೦ |
| ಭಕ್ತಿಯೋಗ ... ... ... | ೧ | ೦ | ೦ |
| ರಾಜಯೋಗ ... ... ... | ೨ | ೧೦ | ೦ |
| ವಿದ್ಯಾಭ್ಯಾಸ ... ... ... | ೦ | ೧೦ | ೦ |
| ಹಿಂದೂ ಧರ್ಮಸಾರ .. ... ... | ೦ | ೧೦ | ೦ |
| ವರ್ತಮಾನ ಭಾರತ ... ... ... | ೦ | ೧೦ | ೦ |
| ನನ್ನ ಗುರುದೇವ ... ... ... | ೦ | ೮ | ೦ |
| ಆರತಿ ... ... ... | ೦ | ೬ | ೦ |
| ತ್ರಿವೇಣೀ ... ... ... | ೧ | ೦ | ೦ |
| ಶಿವಶ್ಯಾಮ ನಾಮ ... ... ... | ೦ | ೨ | ೦ |
| ಶ್ರೀ ಗುರುದೇವರ ವಚನಗಳು ... ... | ೧ | ೦ | ೦ |
| ಚಿಕಾಗೊ ಉಪನ್ಯಾಸ ... ... ... | ೦ | ೬ | ೦ |
| ನನ್ನ ಜೀವನ ಮತ್ತು ಧ್ಯೇಯ ... ... | ೦ | ೪ | ೦ |
| ಈಶ್ವರಾನುರಾಗ ... ... ... | ೦ | ೪ | ೦ |
| ಶ್ರೀ ರಾಮಕೃಷ್ಣ ಲೀಲಾಪ್ರಸಂಗ (ಗುರುಭಾವ) ... | ೩ | ೦ | ೦ |
| ನಾಗಮಹಾಶಯ ... ... ... | ೧ | ೮ | ೦ |
| ದಿವ್ಯವಾಣಿ ... ... ... | ೨ | ೦ | ೦ |
| ಶ್ರೀ ರಾಮಕೃಷ್ಣ ವಚನಾಮೃತ ಭಾಗ ೧ ... ... | ೨ | ೦ | ೦ |
| ,, ,, ೨ ... ... | ೨ | ೦ | ೦ |
| Drig Drishya Viveka ... ... | ೨ | ೦ | ೦ |
| Mandukya Upanishad with Goudapada karika ... | ೮ | ೦ | ೦ |